ನಾಡೋಜ ಡಾ. ಚೆನ್ನವೀರ ಕಣವಿ
ಚೆಂಬೆಳಕು. ೯ನೆಯ ಅಡ್ಡರಸ್ತೆ
ಕಲ್ಯಾಣ ನಗರ
ಧಾರವಾಡ - ೫೮೦ ೦೦೭

✆ : ೨೨೨೭೨೭೭

೨೧-೮-೨೦೦೭

ಹುಟ್ಟಿದೊಡನೆಯೇ ಮಗು ಮಾತಾಡತೊಡಗಿದರೆ ಯಾರಿಗೆ ಆಶ್ಚರ್ಯವಾಗುವದಿಲ್ಲ? ಶಾಂತಾವರ ಕನ್ನಡ ಸಂಘ ಕಳೆದ ಮೂರು ದಶಕಗಳಲ್ಲಿ ಮಾಡಿ ತೋರಿಸಿದ ಕೆಲಸ ಅಷ್ಟು ಅದ್ಭುತವಾದದ್ದು. ಉಪನ್ಯಾಸ ಮಾಲೆ, ಗ್ರಂಥ ಪ್ರಕಟಣೆ, ವಿಚಾರಗೋಷ್ಠಿ, ಸಾಧಕರಿಗೆ ಸನ್ಮಾನ, ಮುದ್ದಣ ಕಾವ್ಯ ಪ್ರಶಸ್ತಿ, ಭವ್ಯವಾದ ಕನ್ನಡ ಭವನದ ನಿರ್ಮಾಣ — ಇತ್ಯಾದಿ ಅರ್ಥಪೂರ್ಣ ಚಟುವಟಿಕೆಗಳ ಮೂಲಕ ಗ್ರಾಮಾಂತರ ಪ್ರದೇಶದಲ್ಲಿ ಕೂಡ ಸಾಂಸ್ಕೃತಿಕವಾಗಿ ಕನ್ನಡವನ್ನು ಕಟ್ಟುವ ಕಾರ್ಯವನ್ನು ಹೇಗೆ ಮಾಡಬಹುದು ಎಂಬುದಕ್ಕೆ ಇದು ಮಾದರಿಯಾಗಿ ನಿಲ್ಲುತ್ತದೆ.

ಇದೀಗ ಮೂವತ್ತನೆಯ ವರ್ಷಾಚರಣೆಯ ಸಂದರ್ಭದಲ್ಲಿ ಈ ಸಂಘವು 'ನಾಡಿಗೆ ನಮನ' ಎನ್ನುವ ಸಾಹಿತ್ಯ ಸಂಸ್ಕೃತಿ ಚಿಂತನ ಗ್ರಂಥಮಾಲೆಯನ್ನು ಪ್ರಾರಂಭಿಸಿ ಸದ್ದಿಲ್ಲದೆ ಮತ್ತೊಂದು ಮಹತ್ತರದ ಹೆಜ್ಜೆಯನ್ನು ಮುಂದಿಟ್ಟಿದೆ. ನಾಡಿನ ಸೇವೆಗೈದು ತೀರಿದಂತೆ ಅಂದಿನ ದಕ್ಷಿಣ ಕನ್ನಡವು ನವೋದಯಕಾಲಕ್ಕೆ ನೀಡಿದ ಬಳುವಳಿ ಕೊಡುಗೆಯಿಂದ ಆನಂತರದಲ್ಲಿ, ವಿವಿಧ ಕ್ಷೇತ್ರಗಳಲ್ಲಿ ವಿಶಿಷ್ಟ ಸೇವೆ ಸಲ್ಲಿಸಿದ ವ್ಯಕ್ತಿಗಳ ಸಾಧನೆಯನ್ನು ಸಂಕ್ಷಿಪ್ತವಾಗಿ, ಸಾರವತ್ತಾಗಿ ಪರಿಚಯಿಸುವ ಸುಲಭಸ್ವರೂಪದ ಹತ್ತು ಪುಸ್ತಕಗಳನ್ನು ಹೊರತಂದಿದ್ದು ಇನ್ನೂ ಎರಡು ಕಂತುಗಳನ್ನು ಅದು ಇದೇ ವರ್ಷದಲ್ಲಿಯೇ ತರಲಿದೆ.

ಸಾಹಿತ್ಯ ಮತ್ತು ಸಂಸ್ಕೃತಿಯ ಪ್ರಸಾರಕ್ಕೆ ಪೂರಕವಾಗಬಲ್ಲ ಇಂಥ ಕಾರ್ಯ ಎಲ್ಲ ಜಿಲ್ಲೆಗಳ ಸಾಹಿತ್ಯ-ಸಂಸ್ಕೃತಿ ಸಂಘಗಳಿಗೆ ಪ್ರೇರಕ ಶಕ್ತಿಯಾಗಿ ಪರಿಣಮಿಸಲಿ ಎಂದು ಹಾರೈಸುತ್ತೇನೆ. ಈ ಬಗೆಯ ಕನ್ನಡದ ಕೆಲಸ, ದೈನಂದಿನ ಕಾಳಜಿಗಳೇ ಕನ್ನಡವನ್ನು ಕಾಪಾಡಬಲ್ಲವು. ಸುವರ್ಣ ಕರ್ನಾಟಕದ ಆಚರಣೆ ಅರ್ಥಪೂರ್ಣವಾಗುವದು ಇಂಥ ಕೆಲಸಗಳಿಂದ ಮಾತ್ರ.

— ಚೆನ್ನವೀರ ಕಣವಿ



ಕಾಂತಾವರ ಕನ್ನಡ ಸಂಘದಿಂದ 'ನಾಡಿಗೆ ನಮಸ್ಕಾರ'
ಸಾಹಿತ್ಯ ಸಂಸ್ಕೃತಿ ಚಿಂತನ ಗ್ರಂಥಮಾಲೆ
ಕುಸುಮ - ೧೨

# ಪಾಡಿಗಾರು ವೆಂಕಟರಮಣ ಆಚಾರ್ಯರು

(ಪಾ. ವೆಂ. ಆಚಾರ್ಯ)

ಪ್ರೊ. ಶ್ರೀನಿವಾಸ ಹಾವನೂರ

*ಅಧಿಕೃತ ಮಾರಾಟಗಾರರು*

ಜ್ಞಾನಗಂಗಾ ಪುಸ್ತಕ ಮಳಿಗೆ
ಪ್ರವಾಸಿ ಮಂದಿರದ ಎದುರು, ದರ್ಬೆ, ಪುತ್ತೂರು - 574202, (ದ.ಕ.)
ದೂರವಾಣಿ: 08251 - 232421
ಸಂಚಾರವಾಣಿ: 94804 51560

'**Padigaaru Venkataramana Acharyaru**' -
By Prof. Srinivas Havanoora,. Published by Kannada Sangha, Kanthavara - 574129, Karkala Tq., Udupi Dist. Phone: 08258-276216, Mob. : 99007 01666

First Impression : 2008

Pages : 52

© : Author

Price : Rs. 33.00

Printers : Manorama Offset Printers, Bejai, Mangalore.
Cover Design : John Chandran
D.T.P. : Prasadhan Computers, Bejai, Mangalore.

# ನಾಡಿಗೆ ನಮಸ್ಕಾರ

ನಮ್ಮ ನಾಡು ಅಂದಾಕ್ಷಣ ನಮ್ಮ ಕಣ್ಣ ಮುಂದೆ ಬರುವುದು ನೆಲ ಮತ್ತು ಜಲ. ಅವುಗಳಷ್ಟೇ ಅಲ್ಲ, ನಮ್ಮ ಮನಸ್ಸೂ ಈ ನಾಡಿನ ಒಂದು ಭಾಗ ಎಂಬ ಭಾವನೆಯ ರೂಪಕವಾಗಿ-ಸುವರ್ಣ ಕರ್ನಾಟಕದ ಸಂಭ್ರಮದಲ್ಲಿರುವ ನಾಡಿಗೆ, ಕಾಂತಾವರ ಕನ್ನಡ ಸಂಘವು ಅರ್ಪಿಸುವ ಪುಟ್ಟ ಕಾಣಿಕೆ- 'ನಾಡಿಗೆ ನಮಸ್ಕಾರ' ಎನ್ನುವ ಸಾಹಿತ್ಯ ಸಂಸ್ಕೃತಿ ಚಿಂತನ ಗ್ರಂಥಮಾಲೆ.

ಕಾಂತಾವರ ಎನ್ನುವುದು ಉಡುಪಿ ಜಿಲ್ಲೆಯ ಕಾರ್ಕಳ ಸಮೀಪದ ಒಂದು ಹಳ್ಳಿಯ ಹೆಸರು. ಊರಿನ ಹೆಸರನ್ನೇ ಮುಖ್ಯವಾಗಿರಿಸಿಕೊಂಡು ಹುಟ್ಟಿದ (26 ಮೇ 1976) ಕನ್ನಡ ಸಂಘಕ್ಕೆ ಈಗ ಮೂವತ್ತರ ಯೌವನ. ನಾಡು ಸುವರ್ಣ ಸಂಭ್ರಮದ ಆಚರಣೆಯಲ್ಲಿರುವಾಗ ಸಂಘವು ಮೂವತ್ತರ ಯೌವನದಲ್ಲಿರುವುದು ಒಂದು ಯೋಗಾಯೋಗ. ಯುವ ಪ್ರತಿಭಾಶಕ್ತಿ ನಾಡನ್ನು ಹೇಗೆ ಕಟ್ಟಬಹುದು ಎಂಬುದಕ್ಕೆ ಸಂಕೇತವಾಗಿ ಈ ಗ್ರಂಥಮಾಲೆಯನ್ನು ರೂಪಿಸುವ ಸಂಕಲ್ಪ ನಮ್ಮದು.

ಈಗಲೂ ಹಳ್ಳಿಯಾಗಿಯೇ ಇರುವ ಊರಿನ ಹೆಸರಿನ ಗಡಿಗಳನ್ನು ಹರಿದೊಗೆದದ್ದು ಈ ಸಂಘ. ಅದು ಹುಟ್ಟಿದ ಮೊದಲ ವರುಷದಲ್ಲೇ (1976) ಮಾಡಿದ ಸಾಹಸ 'ದಕ್ಷಿಣ ಕನ್ನಡ ಕಾವ್ಯ' (1970-76) ಎಂಬ (ಆಗ ಯಾವ ಜಿಲ್ಲೆಯಲ್ಲೂ ಆಗದೇ ಇದ್ದ) ಜಿಲ್ಲೆಯ ಕಾವ್ಯ ಪರಂಪರೆಯನ್ನು ಗುರುತಿಸುವ ಆ್ಯಂಥಾಲಜಿಯ ಪ್ರಕಟಣೆ. ಅದರ ಜೊತೆಗೇ ಸಾಹಿತ್ಯಿಕ ವಿಚಾರಗಳನ್ನು ಜನಸಾಮಾನ್ಯರ ಮನೆಬಾಗಿಲಿಗೆ ತರುವ ಉದ್ದೇಶದ ಉಪನ್ಯಾಸ ಮಾಲೆ, ಗ್ರಂಥ ಪ್ರಕಟಣೆ, ವಿಚಾರಗೋಷ್ಠಿ, ಸಾಧಕರಿಗೆ ಸನ್ಮಾನ ಮೊದಲಾದ ಕಾರ್ಯಕ್ರಮಗಳು. ಈ ನಡುವೆ ನಂದಳಿಕೆಯ ವರಕವಿ ಮುದ್ದಣನ ಹೆಸರಿನಲ್ಲಿ ಮುದ್ದಣ ಸ್ಮಾರಕ ಕಾವ್ಯ ಸ್ಪರ್ಧೆಯ ಸ್ಥಾಪನೆ (1979). ತನ್ಮೂಲಕ - ಖಾಸಗಿಯಾಗಿ ಪ್ರಶಸ್ತಿಗಳೇ ಇಲ್ಲದಿದ್ದ ಆ ದಿನಗಳಲ್ಲಿ - ಸರಕಾರೇತರ ವಾಗಿಯೂ ಪ್ರಶಸ್ತಿಗಳನ್ನು ನೀಡಲು ಸಾಧ್ಯ (ನೀಡುವುದು ಅಗತ್ಯ) ಎಂಬ ಪರಿಕಲ್ಪನೆ.

ಆಮೇಲೆ, ಸಂಘಕ್ಕೆ 25 ವರುಷಗಳು ತುಂಬಿದ ಸಂದರ್ಭದಲ್ಲಿ (15 ಏಪ್ರಿಲ್ 2001) ರಾಜ್ಯಮಟ್ಟದ ಸಾಹಿತ್ಯ - ಸಂಸ್ಕೃತಿ ಸಮ್ಮೇಳನ ಮತ್ತು ಅದರ ಸವಿನೆನಪಿಗಾಗಿ ಮತ್ತೆ 'ದಕ್ಷಿಣ ಕನ್ನಡದ ಶತಮಾನದ ಕಾವ್ಯ' (1900-2000) ಎಂಬ ಬೃಹತ್ ಗ್ರಂಥದ (ಲಕ್ಷ ರೂಪಾಯಿಗಳಿಗೂ ಮಿಕ್ಕಿದ ವೆಚ್ಚದಲ್ಲಿ) ಪ್ರಕಟಣೆ. ಇದರಿಂದ ಪ್ರೇರಣೆಗೊಂಡ ಪುತ್ತೂರು ಕರ್ನಾಟಕ ಸಂಘವು 'ದಕ್ಷಿಣ ಕನ್ನಡದ ಶತಮಾನದ ಕತೆಗಳು' (1900-2000) ಎಂಬ ಬೃಹತ್ ಕಥಾ ಸಂಗ್ರಹದ ಪ್ರಕಟಣೆಗೆ ಕೈಹಾಕಿತು. ಒಂದು ಜಿಲ್ಲೆಯ ಗಡಿಯೊಳಗಿನ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಪರಂಪರೆಯ ಅಧ್ಯಯನ ಮತ್ತು ಪ್ರಕಾಶನವು ನಾಡನ್ನು ಅರಿಯುವ ಮತ್ತು ಎಚ್ಚರಿಸುವ ಕಾಯಕವೂ ಹೌದೆನ್ನುವಂಥ ಚಟುವಟಿಕೆಗಳಿಗೆ ಇದು ಮಾದರಿಯಾಯಿತು ಎನ್ನುವುದು ಈ ಹಳ್ಳಿಗೆ ಸಂದ ಗೌರವ.

ಕಾಂತಾವರದ ಮಣ್ಣಿಗೂ ಕರ್ನಾಟಕದ ಏಕೀಕರಣಕ್ಕೂ ನೇರ ಸಂಬಂಧ ಉಂಟು. ಈ ಮಣ್ಣಿನ ಮಗ, ಕಾಂತಾವರ ಬಾರಾಡಿ ಬೀಡು (ಕೆ. ಬಿ.) ಜಿನರಾಜ ಹೆಗ್ಡೆ ಅವರು ಏಕೀಕರಣದ ಅಗ್ರಗಣ್ಯ ನಾಯಕರಲ್ಲಿ ಒಬ್ಬರು. ಅವರ ಜನ್ಮ ಶತಮಾನೋತ್ಸವದ ಸಂದರ್ಭದಲ್ಲಿ ಅವರ ನೆನಪು ಶಾಶ್ವತವಾಗಿರುವಂತೆ ಕಾಂತಾವರದಲ್ಲಿ ಕನ್ನಡ ಸಂಘವು 25 ಲಕ್ಷ ರೂಪಾಯಿಗಳ ವೆಚ್ಚದಲ್ಲಿ

(ಸರಕಾರದ ಸಹಾಯಧನ 12 ಲಕ್ಷ ರೂಪಾಯಿಗಳು ಸೇರಿ) 'ಕನ್ನಡ ಭವನ'ವೊಂದನ್ನು ನಿರ್ಮಿಸಿತು. ಆ ಭವನದಲ್ಲೇ 'ಮುದ್ದಣ ಸ್ಮಾರಕ ಕಾವ್ಯ ಪ್ರಶಸ್ತಿ ಯೋಜನೆ'ಯ ಬೆಳ್ಳಿಹಬ್ಬವನ್ನು (7 ನವಂಬರ 2004) ಪ್ರಶಸ್ತಿ ಪುರಸ್ಕೃತರೆಲ್ಲರ ಸಮಕ್ಷಮದಲ್ಲಿ ಆಚರಿಸಿತು.

ಪ್ರತಿಯೊಂದು ಜಿಲ್ಲೆಗಳಲ್ಲೂ ಅಲ್ಲಿನ ಸಾಧಕರ ಅಧ್ಯಯನ ನಾಡಿನ ಒಟ್ಟು ಸಂಸ್ಕೃತಿಯ ಅನಾವರಣಕ್ಕೆ ಪೂರಕ ಎಂಬ ಹಿನ್ನೆಲೆಯಲ್ಲಿ - ಕಾಸರಗೋಡೂ ಸೇರಿದಂತೆ ಅಖಂಡ ದಕ್ಷಿಣ ಕನ್ನಡವು ಕನ್ನಡಕ್ಕೆ ನೀಡಿದ ಒಟ್ಟೂ ಕೊಡುಗೆಯ ಹಿನ್ನೆಲೆಯಲ್ಲಿರುವ ವ್ಯಕ್ತಿಗಳನ್ನು ಮುನ್ನಲೆಗೆ ತರುವ ಪ್ರಯತ್ನ ಈ ಮಾಲೆಯದ್ದು. "ಒಂದು ಜಿಲ್ಲೆಗೆ ಯಾಕೆ ಇದನ್ನು ಸೀಮಿತಗೊಳಿಸಿದಿರಿ? ಇದು ಸಂಕುಚಿತ ಮನೋಭಾವವಲ್ಲವೇ?" ಎಂಬ ಪ್ರಶ್ನೆ ನಮಗೆ ಇದಿರಾದರೆ ಅದಕ್ಕೆ ಉತ್ತರ ಸರಳ. ಪ್ರತಿ ಜಿಲ್ಲೆಯಲ್ಲೂ ಇಂಥ ಪ್ರಯತ್ನಗಳು ನಡೆಯಬೇಕು, ಒಂದು ಜಿಲ್ಲೆ - ಇನ್ನೊಂದು ಜಿಲ್ಲೆಗೆ ಈ ರೀತಿ ಆರೋಗ್ಯಪೂರ್ಣ ಸ್ಪರ್ಧೆಗೆ ಕಾರಣವಾಗಬೇಕು ಎಂಬ ನಿಲುವು ನಮ್ಮದು. ದುರದೃಷ್ಟ ಅಂದರೆ ಎರಡೆರಡು ಬಾರಿ 'ದಕ್ಷಿಣ ಕನ್ನಡ ಕಾವ್ಯ' ಎಂಬ ಆ್ಯಂಥಾಲಜಿಯನ್ನು ಸಂಘವು ಹೊರತಂದರೂ, ಉಳಿದ ಜಿಲ್ಲೆಗಳಲ್ಲಿ ಇಂಥ ಪ್ರಯತ್ನ ನಡೆದ ಪ್ರಕರಣ ನಮ್ಮ ಗಮನಕ್ಕೆ ಬಂದಿಲ್ಲ. ಎಲ್ಲವನ್ನೂ ಸರಕಾರ ಅಥವಾ ಅಕಾಡೆಮಿಗಳಿಂದ ನಿರೀಕ್ಷಿಸಲಾಗದು ಎಂಬ ಧೋರಣೆ ಗ್ರಾಮಾಂತರ ಪ್ರದೇಶದ ಈ ಕನ್ನಡ ಸಂಘದ್ದು.

ಈ ಗ್ರಂಥಮಾಲೆಯಲ್ಲಿ ಅನಾವರಣಗೊಳ್ಳುತ್ತಿರುವ ಜಿಲ್ಲೆಯ ಸಾಧಕರ ಸಾಧನೆ ಮಾತ್ರ ದೊಡ್ಡದು, ಉಳಿದವರದ್ದು ನಗಣ್ಯ ಎಂಬ ಭಾವನೆ ನಮ್ಮಲ್ಲಿಲ್ಲ. ಅಥವಾ ಆಯ್ಕೆಗೆ ಯಾವ ಮಾನದಂಡಗಳನ್ನಿಟ್ಟರೂ ಆಯ್ಕೆ ಖಂಡಿತ ಸುಲಭಸಾಧ್ಯವಾದದ್ದಲ್ಲ. ಹಾಗಾಗಿ ವಿಭಿನ್ನ ದೃಷ್ಟಿಕೋನ ಮತ್ತು ವೈವಿಧ್ಯಮಯ ಕ್ಷೇತ್ರಗಳ ಕಡೆಗೆ ಹೆಚ್ಚು ಒತ್ತು ನೀಡಿ ಈ ಮಾಲೆಯಲ್ಲಿ ಮೂವತ್ತು ಮಂದಿಯನ್ನಷ್ಟೇ ಆಯ್ಕೆ ಮಾಡಲಾಗಿದೆ. ಇಲ್ಲಿ ಅನಾವರಣಗೊಳ್ಳದೇ ಇರುವ ಇಂಥ ಸಾಧಕರು ಇನ್ನೂ ಹತ್ತಾರು ಮಂದಿ ಇದ್ದಾರೆ, ಅವರನ್ನೂ ಹೀಗೆ ಪರಿಚಯಿಸುವ ಕೆಲಸ ಆಗಬೇಕು ಎಂಬುದನ್ನು ಸಂಘವು ಖಂಡಿತ ಒಪ್ಪಿಕೊಳ್ಳುತ್ತದೆ; ಇಂಥ ಇನ್ನೊಂದು ಪ್ರಯತ್ನವನ್ನು ಸ್ವಾಗತಿಸುತ್ತದೆ.

**ಇಂತಹ ಯೋಜನೆಯ ಮೊದಲ ಕಂತಿಗೆ ನಾಡಿನಾದ್ಯಂತ ಸಿಕ್ಕಿದ ಪ್ರೋತ್ಸಾಹದಿಂದ ಇದೀಗ ಎರಡನೇ ಕಂತಿನ ಹತ್ತು ಕೃತಿಗಳು ಅನಾವರಣಗೊಳ್ಳುತ್ತಿವೆ.**

ಹೊತ್ತಗೆಗಳ ಮುದ್ರಣ ಮತ್ತು ಮಾರಾಟದಲ್ಲಿ ಸಕಲ ಸಹಾಯವನ್ನು ನೀಡಲು ಮುಂದಾಗಿರುವ ಜ್ಞಾನಗಂಗಾ ಪುಸ್ತಕ ಮಳಿಗೆ, ಪುತ್ತೂರು ಮತ್ತು ಪ್ರಕಾಶ ಕೊಡಂಕಿರಿ ಅವರ ಸಹಾಯ ದೊಡ್ಡದು.

ಪ್ರತಿಫಲಾಪೇಕ್ಷೆ ಬಯಸದೆ ಈ ಮಾಲೆಗೆ ಬರೆದ ಲೇಖಕರ ಔದಾರ್ಯ ಮತ್ತು ಅಂದವಾಗಿ ಡಿಟಿಪಿ ಮಾಡಿದ ಪ್ರಸಾಧನ್ ಕಂಪ್ಯೂಟರ್ಸ್, ಬಿಜೈ, ಮಂಗಳೂರು ಮತ್ತು ಅಂದವಾಗಿ ಮುದ್ರಿಸಿದ ಮನೋರಮಾ ಆಫ್‌ಸೆಟ್ ಪ್ರಿಂಟರ್ಸ್‌ನ ಬಂಧುಗಳ ಕೊಡುಗೆಗೆ ನಾವು ಕೃತಜ್ಞರು.

**ಕಾಂತಾವರ ಕನ್ನಡ ಸಂಘ**
ದಿ : ೧೪, ಜನವರಿ ೨೦೦೮

**ಡಾ. ನಾ. ಮೊಗಸಾಲೆ**
ಕಾರ್ಯಾಧ್ಯಕ್ಷರು

# ೧. ಇವರೇ ನಮ್ಮ ಪಾ.ವೆಂ. ಆಚಾರ್ಯರು

## ಬಾಲ್ಯ ಮತ್ತು ಶಿಕ್ಷಣ

ಜನನ - ೧೯೧೫ ಫೆಬ್ರುವರಿ ೫. ತಂದೆ ಪಾಡಿಗಾರು ಲಕ್ಷ್ಮೀ ನಾರಾಯಣಾಚಾರ್ಯರು. ತಾಯಿ ಸೀತಮ್ಮ. ನಾಲ್ಕು ಹೆಣ್ಣುಮಕ್ಕಳ ನಂತರ ಕೊನೆಯವನಾಗಿ ವೆಂಕಟರಮಣನ ಜನನ. ಹುಟ್ಟಿದ ಮರುವರ್ಷ ತಂದೆ ಸೋದೆ ಶ್ರೀ ವಾದಿರಾಜ ಮಠದಲ್ಲಿ ಪಾರುಪತ್ಯಗಾರರಾಗಿ ಹೋದದ್ದು.

ತಂದೆ ವಿದ್ವಾಂಸರು; ಕಲಾವಿದರು. ರಸಿಕರೂ ಹೌದು. ನಾಟಕ, ಹರಿಕಥೆಗಳಲ್ಲಿ ಆಸಕ್ತಿ, ಹರಿಕಥೆಗೆ ಬೇಕಾದ ಹಾಡುಗಳನ್ನು ರಚಿಸಬಲ್ಲವರಾಗಿದ್ದರು. ತುಂಬಾ ಗಳಿಸುತ್ತಿದ್ದರು. ಆದರೆ ಸತ್ತ ಮೇಲೆ ಪತ್ನಿ, ಮಕ್ಕಳಿಗೆ ಬಿಟ್ಟುಹೋದದ್ದು ಒಂದೇ - ಅದುವೆ ಬಡತನ! ಅವರು ತೀರಿಹೋದಾಗ ಮಗನಿಗೆ ಕೇವಲ ಐದು ವರ್ಷ. ಹೀಗೆ ಬದುಕನ್ನು ಕಣ್ಣು ತೆರೆದು ನೋಡುವಷ್ಟರಲ್ಲಿ ಬಡತನ ಬಂದೊದಗಿದ್ದರಿಂದ ಅದು ತನಗೆ ಸಹಜವಾದ ಮಾಮೂಲಿಯ ಪರಿಸ್ಥಿತಿಯೇ ಎಂಬ ಭಾವನೆ. ಆಗ ಅಕ್ಕ ನೇತ್ರಾವತಿ ಕೊಡಿಟ್ಟ ೮೦೦ ರೂ. ಹಣದ ಬಡ್ಡಿಯಲ್ಲಿ, ಕುಟುಂಬದ ವೆಚ್ಚ. ಉಡುಪಿಯ ತಮ್ಮದೊಂದು ಸಣ್ಣ ಮನೆಯಲ್ಲಿ ವಾಸ.

ವೆಂಕಟರಮಣ ಶಾಲೆಗೆ ಹೋಗಬೇಕು, ಎಂದರೆ ಆಗಿನ ದಿನಗಳಲ್ಲಿ ಎಂಟಾಣೆ ಫೀ ಕೊಡಬೇಕಾಗಿದ್ದಿತು. ಪ್ರಾಥಮಿಕ ಶಿಕ್ಷಣ ಉಚಿತವಾಗಿರಲಿಲ್ಲ. ತಾಯಿ ಹೇಳಿದರು : "ನಿನಗೆ ಕಲಿಯಬೇಕೆಂದಿದ್ದರೆ ಸಂಸ್ಕೃತ ಕಲಿ. ಇಲ್ಲವೆ ಯಾವುದಾದರೂ ಊರಿಗೆ ಹೋಗಿ ಹೋಟೆಲಿನಲ್ಲಿ ಕೆಲಸ ಹಿಡಿ".

ಫೀ ಕೊಡಲಾಗದೆ ಒಂದು ದಿನ ಶಾಲೆಯಿಂದ ಹೊರಹಾಕಿಸಿಕೊಂಡು ಅಳುತ್ತ ಬರುತ್ತಿದ್ದಾಗ ಓರ್ವ ಧಾರ್ಮಿಕ ಮಹಿಳೆ ಹೇಳಿದ್ದು : "ಇಕೋ ಎಂಟಾಣೆ. ಮನೆಗೆ ಬಂದು

ಪೂಜೆ ಮಾಡು. ಗಂಜಿ ಊಟ ಮಾಡಿ ಶಾಲೆಗೆ ಹೋಗುವಿಯಂತೆ".

೧೯೨೪- ಹೈಸ್ಕೂಲ್ ಶಿಕ್ಷಣವೂ ಬಡತನದ ಸ್ಥಿತಿಯಲ್ಲಿ. ಅವರ ದೊಡ್ಡಪ್ಪನ ಮಗ ವೆಂಕಟದಾಸಾರ್ಯರ ಸಹಾಯದಿಂದ ಹೈಸ್ಕೂಲ್ ಶಿಕ್ಷಣ. ಕೊನೆಯ ಪರೀಕ್ಷೆಯಲ್ಲಿ ಶಾಲೆಗೆ ಪ್ರಥಮ ಸ್ಥಾನ. ಗಣಿತಕ್ಕೆ ೧೦೦%. ಇಂಗ್ಲೀಷ್‌ಗೆ ೮೫%.

೧೯೩೧- ಕಾಲೇಜ ಶಿಕ್ಷಣ? ಮಂಗಳೂರಿಗೆ ಹೋಗಬೇಕು. ಹೈಸ್ಕೂಲ್ ಮುಖ್ಯಾಧ್ಯಾಪಕರು ಸೂಚಿಸಿದರು: "ಅಲ್ಲಿಯ ಅಲ್ಲೊಯಿಸಿಯಸ್ ಕಾಲೇಜಿನಲ್ಲಿ ಮಾಫಿ ಮಾಡಿಸುವೆ". ಆದರೆ ಊಟಕ್ಕೇನು ಮಾಡಬೇಕು? ಸರಿ, ಅಲ್ಲಿಗೆ ಮುಂದಿನ ಶಿಕ್ಷಣದ ಮುಕ್ತಾಯ.

## ನೌಕರಿ

೧೯೩೨ - ಕಡಿಯಾಳಿ ಪ್ರೈಮರಿ ಶಾಲೆಯಲ್ಲಿ ಮಾಸ್ತರಿಕೆ. ವಿದ್ಯಾರ್ಥಿ ಕು.ಶಿ. ಹರಿದಾಸಭಟ್ಟರಿಗೆ "ಅಬ್ಬಾ! ಈ ಮಾಸ್ತರರಿಗೆ ಗಣಿತದಾಗೆ ನೂರಕ್ಕೆ ನೂರು!" ಎಂದು ಆಶ್ಚರ್ಯ. ಆದರೆ ಎಳೆಯ ಮಕ್ಕಳಿಗೆ ಕಲಿಸುವ ವಿಷಯದಲ್ಲಿ ಪಾಪಂ. ಪೂರ್ಣತಃ ಅಯಶಸ್ವಿ. "ಎಳೆಕರುಗಳಿಗೆ ಎಳೆಹುಲ್ಲು ತಿನಿಸದೇ ಹೋದೆ" ಎಂದಿದ್ದಾರೆ.

೧೯೩೩- ಶಾಲೆಯ ನೌಕರಿಗೆ ಶರಣು ಹೊಡೆದು, ಪಣಿಯಾಡಿ ಅವರ `ಸ್ವದೇಶೀ ವಸ್ತು ಭಂಡಾರ'ದಲ್ಲಿ ಹಾಗೂ ಅವರ `ತುಳುನಾಡು ಪ್ರೆಸ್'ನಲ್ಲಿ ನೌಕರಿ: ಕಾರಕೂನಿಕೆ, ಲೆಕ್ಕಪತ್ರ ಮತ್ತು ಮುದ್ರಣ ಕಾರ್ಯಗಳಲ್ಲಿ ತಳಪಾಯದ ಅನುಭವ. ಮುಂದಿನ ಜೀವನದಲ್ಲಿ ಅದರ ಅನನ್ವಿತ ಪ್ರಯೋಜನ. ಪಣಿಯಾಡಿ ಅವರ ಅಪ್ಪಟ ದೇಶಭಕ್ತಿಯನ್ನೂ ಮೈಗೂಡಿಸಿಕೊಂಡದ್ದು.

೧೯೩೭- ಮದುವೆ. ಲಕ್ಷ್ಮೀಬಾಯಿಯೊಡನೆ.

೧೯೩೮- 'ಅಂತರಂಗ' ಪತ್ರಿಕೆಯಲ್ಲಿ ಸಂಪಾದಕೀಯ ಕೆಲಸದ ಅನುಭವ.

೧೯೪೦- ಪಣಿಯಾಡಿಯವರ ವ್ಯವಹಾರವೆಲ್ಲ ದಿವಾಳಿಯ ಹಾದಿಯಲ್ಲಿ. ಸಂಸಾರವನ್ನು ಉಡುಪಿಯಲ್ಲೇ ಬಿಟ್ಟು ಆಗಿನ ಮದ್ರಾಸಿಗೆ ಪಯಣ. ಹೋಟೆಲೊಂದರಲ್ಲಿ ಬಿಲ್ ರೈಟರ್! ೧೮ ರೂ. ಸಂಬಳ. ಅದರಲ್ಲಿ ೨ರೂ ಮಾತ್ರ ಇಟ್ಟುಕೊಂಡು ಉಳಿದದ್ದು ಮನೆಗೆ.

೧೯೪೧- ದ್ವಿತೀಯ ಮಹಾಯುದ್ಧ ಆದಾಗಲೇ ಆರಂಭವಾಗಿತ್ತು. ಜಪಾನೀ ವಿಮಾನಗಳು ಮದ್ರಾಸಿನ ಮೇಲೆ ಹಾರಾಡುತ್ತಿದ್ದವು. ಉಡುಪಿಯಲ್ಲಿದ್ದವರಿಗೆ ಗಾಬರಿ. ಮೂರು ಮಕ್ಕಳ ಸಂಸಾರ ಬೇರೆ.

೧೯೪೨- ಹೀಗಾಗಿ ಧಾರವಾಡಕ್ಕೆ ಬಂದದ್ದು. ಅಲ್ಲಿ ರಂಗರಾವ್ ಸಹೋದರರು ನಡೆಸುತ್ತಿದ್ದ ಧಾರವಾಡ ರೆಸ್ಟೋರೆಂಟಿನಲ್ಲಿ ಅದೇ ಬಿಲ್ ರೈಟರ್ ಕೆಲಸ! ಆ ಹೋಟೆಲ್ ಸಾಹಿತಿಗಳ ಮತ್ತು ಕಾಲೇಜ್ ವಿದ್ಯಾರ್ಥಿಗಳ ನೆಚ್ಚಿನ Chit-N-Chat ಆಗಿದ್ದಿತು. ವಡೆ, ದೋಸೆ, ಚಹಾಗಳ ಜೊತೆಗೆ ಹರಟೆ, ನಗೆ, ಚರ್ಚಾತ್ಮಕ ಜಗಳ, ಏನೆಲ್ಲ. ಹಾಗೆ ಬರುತ್ತಿದ್ದವರಲ್ಲಿ ದ.ಬಾ. ಕುಲಕರ್ಣಿ, ಹೊಸಕೇರಿ ನಾರಾಯಣರಾವ್, ಪಾಟೀಲ ಪುಟ್ಟಪ್ಪ ಅವರುಗಳೂ ಹೌದು. ಆಗೆಲ್ಲ ಈ ಬಿಲ್‌ರೈಟರನೂ ಮಾತಿನಲ್ಲಿ ಭಾಗವಹಿಸುತ್ತಿದ್ದ. ಅದನ್ನು ಕೇಳಿದವರಿಗೆ ಪ್ರತಿಸಲವೂ ಅನಿಸುತ್ತಿತ್ತು. ಈತ ಎಷ್ಟೊಂದು ಓದಿದ್ದಾನೆ! ತಿಳಿದುಕೊಂಡಿದ್ದಾನೆ! ಅಲ್ಲದೇ ಆತ ಕವಿ, ಕತೆಗಾರನೂ ಆಗಿದ್ದಾನೆಂಬುದು ಕ್ರಮೇಣ ಬೆಳಕಿಗೆ ಬಂತು.

೧೯೪೨ ನವೆಂಬರ್ - ಹೊಸಕೇರಿ ನಾರಾಯಣರಾಯರು ಒಮ್ಮೆ ಹುಬ್ಬಳ್ಳಿಗೆ ಹೋದಾಗ ಸಂಯುಕ್ತ ಕರ್ನಾಟಕದ ಮೊಹರೆ ಹಣಮಂತರಾಯರಿಗೆ ಈ ಬಿಲ್-ರೈಟರ್ ವಿಷಯ ಹೇಳಿದರು. `ಈತ ದಕ್ಷಿಣ ಕನ್ನಡ ಜಿಲ್ಲೆಯವನಲ್ಲವೆ? ಮುದ್ರಣ ವಿಷಯವೂ ಗೊತ್ತು' ಎಂದು ಯೋಚಿಸಿ ಮೊಹರೆಯವರು, ಅವರನ್ನು ಸಂಯುಕ್ತ ಕರ್ನಾಟಕ ಪ್ರೆಸ್ಸಿನ ಜಾಬ್ ವಿಭಾಗದಲ್ಲಿ ಮೇಲ್ವಿಚಾರಕನೆಂದು ನಿಯಮಿಸಿಕೊಂಡರು.

೧೯೪೩- ತಡವಿಲ್ಲದೆ ಪ್ರೆಸ್ಸಿನಲ್ಲಿ ಸುಧಾರಣೆ ಮಾಡಿದ್ದು.

೧೯೪೪- ಹ. ರಾ. ಪುರೋಹಿತರು ಸಂಪಾದಕರಾಗಿದ್ದ ಕರ್ಮವೀರದಲ್ಲಿ ಆಗಾಗ ಲೇಖ ಬರೆಯತೊಡಗಿದ್ದು. ಪುರೋಹಿತರು ಒಮ್ಮೆ ೫-೬ ವಾರ ರಜೆಯಲ್ಲಿದ್ದಾಗ ನಿರಾಯಾಸವಾಗಿ ಆ ಸಾಪ್ತಾಹಿಕವನ್ನು ಪಾವೆಂ. ಸಂಪಾದಿಸಿ ಹೊರತಂದರು. ಆಗಿನಿಂದ ನಿಜವಾದ ಪತ್ರಿಕೋದ್ಯಮಿಯಾದರು. ಅವರು ಸಿದ್ಧಪಡಿಸಿದ ಉಡುಪಿಯ ಕೃಷ್ಣಮಠದ ಪರ್ಯಾಯೋತ್ಸವದ ಒಂದು ವಿಶೇಷ ಸಂಚಿಕೆಯಂತೂ ಅಪ್ರತಿಮವಾಗಿತ್ತು.

ಸಂಬಳದಲ್ಲಿ ವಿಶೇಷ ಹೆಚ್ಚಳ! ಹೀಗಾಗಿ ಹೆಂಡತಿ ಮಕ್ಕಳನ್ನು ಕರೆಯಿಸಿಕೊಂಡು ಹುಬ್ಬಳ್ಳಿಯಲ್ಲಿ ಸಂಸಾರ ಹೂಡಿದರು. ಆದರೂ ಯುದ್ಧಕಾಲ. ಆರ್ಥಿಕ ಅಡಚಣೆ. ಸ್ಥಳೀಯ ಹೋಟೆಲಿಗರ ರೇಶನ್ ಅಂಗಡಿಯಲ್ಲಿ ಅಂದಾದುಂದಿ ಲೆಕ್ಕ ಬರೆದದ್ದನ್ನು ಸರಿಪಡಿಸಿದರು. ಅದನ್ನು ಕಂಡು ಕೃಷ್ಣಭವನದ ಮಾಲಿಕರು ತಮ್ಮ ಹೋಟೆಲಿನ ಲೆಕ್ಕ ಬರೆಯುವ ಅರೆ-ಸಮಯದ ಕೆಲಸಕ್ಕೆ ನಿಯಮಿಸಿಕೊಂಡರು. ಪರಿಣಾಮ? ಪಾವೆಂ ಬೆಳಗಿನಿಂದ ರಾತ್ರಿ ೧೦ ಗಂಟೆಯವರೆಗೂ ದುಡಿಯುವಂತಾಯಿತು.

೧೯೪೭- ಪ್ರೆಸ್ಸಿನ ಮೇಲ್ವಿಚಾರಣೆಯ ಕೆಲಸ ತಪ್ಪಿ, ಪೂರ್ಣತಃ ಕರ್ಮವೀರಕ್ಕೆ ಬಂದದ್ದು.

೧೯೫೦- ಕರ್ಮವೀರದಲ್ಲಿ 'ಲಾಂಗೂಲಾಚಾರ್ಯ' ಹೆಸರಿನಲ್ಲಿ ಹರಟೆಗಳನ್ನು ಬರೆಯತೊಡಗಿದ್ದು. ಇದು ಅವರದೇ ಕಲ್ಪನೆ. ಆ ಹೆಸರನ್ನು ಕಚೇರಿಯಲ್ಲಿ ಸುಮ್ಮನೆ ಹರಟೆ ಹೊಡೆಯುತ್ತಿದ್ದಾಗ ಒಬ್ಬರು `ಆಚಾರ್ಯರು ಲಾಂಗೂಲಚಾಲನೆ ಮಾಡುವವರು' ಎಂದಿದ್ದರು. ಅಂತೂ ಬಲು ಬೇಗ ಜನಪ್ರಿಯವಾಯಿತು. ಅದಕ್ಕಾಗಿಯೇ ಪ್ರತಿವಾರ ಕರ್ಮವೀರದ ಸಂಚಿಕೆಯನ್ನು ಕಾಯುವವರೂ ಇದ್ದರು.

೧೯೫೬- ಜುಲೈನಲ್ಲಿ ಡೈಜೆಸ್ಟ್ ಮಾಸಪತ್ರಿಕೆಯ ಆಲೋಚನೆಯು ಮುದ್ರಕ ಜಠಾರ ಹಾಗೂ ಕೌಜಲಗಿಯವರಲ್ಲಿ ಮೂಡಿತ್ತೆಂದು ಪಾವೆಂ ಒಂದೆಡೆ ಹೇಳಿದ್ದಾರೆ. ಸಂಪಾದಕರು ಹೊರಗಿನವರು ಯಾರಾದರೂ ಬೇಕು? ಬೇಡ, ನಮ್ಮವರಲ್ಲೇ ಒಬ್ಬರನ್ನು ಆಯಬೇಕೆಂದಾಗ, ಮೊಹರೆಯವರು ಪಾವೆಂ ಹೆಸರನ್ನು ಗಟ್ಟಿ ಹಿಡಿದರು. ಸರಿ, ಆ ವರ್ಷದ ಸೆಪ್ಟೆಂಬರದಿಂದಲೇ ಪತ್ರಿಕೆ ಹೊರಡಬೇಕು. ಆಚಾರ್ಯರಿಗೆ ಇದ್ದ ಸಮಯ ಕೇವಲ ೧ ೧/೨ ತಿಂಗಳು. ಅಂತೂ ಹೊರಬಂತು. (ಆ ಮೊದಲ ಸಂಚಿಕೆಗೆ ಪುಸ್ತಕ ಸಂಗ್ರಹವನ್ನು ಮಾಡಿಕೊಡಬೇಕೆಂದು ಪಾವೆಂ ನನಗೆ ಹೇಳಿದ್ದು ನೆನಪಿಗೆ ಬರುತ್ತದೆ.)

ಕಸ್ತೂರಿಯ ಸಂಪಾದನ ಕಾರ್ಯದಲ್ಲಿ ತನಗೆ ನೆರವಾಗಲು ಜಿ. ಜಿ. ಹೆಗಡೆಯವರು ಬೇಕೆಂದು ಪಾವೆಂ ಕೇಳಿದ್ದರು. ಕಾರಣವೆಂದರೆ ಅವರಿಗೆ ಬೇರೆ ಭಾಷೆಗಳು ಬರುತ್ತಿದ್ದವು. ಆ ಮುಂದೆ ಗೋಪಾಲ ವಾಜಪೇಯಿ ಮತ್ತು ಮಾಧವ ಮಹಿಷಿ ಸಹಾಯಕರಾಗಿದ್ದರು.

೧೯೫೯- ದಕ್ಷಿಣ ಭಾರತದ ಪತ್ರಿಕೋದ್ಯೋಗಿಗಳೊಡನೆ ಉತ್ತರ ಭಾರತದ ಸಂಚಾರ. ಇವರು ಅಲ್ಲಿಯ ಪತ್ರಕರ್ತರಿಗೆ, ಹಿರಿಯ ಅಧಿಕಾರಿಗಳಿಗೆ ಕೇಳುತ್ತಿದ್ದ ಪ್ರಶ್ನೆ ಮತ್ತು ಆಗಾಗ ತಾವೇ ಕೊಡುತ್ತಿದ್ದ ವಿವರಣೆಗಳು ತುಂಬಾ ಪ್ರಭಾವ ಬೀರಿದ್ದುವು.

೧೯೭೪- ಅಕ್ಟೋಬರ್. ೩೧ರಂದು ಕಚೇರಿಯಲ್ಲಿದ್ದಾಗ ರಕ್ತವನ್ನು ಕಾರಿಕೊಂಡರು. ಕೂಡಲೇ ಆಸ್ಪತ್ರೆಗೆ ದಾಖಲು. ನವೆಂಬರ್ ೧೧ರಂದು ಉದರ ಶಸ್ತ್ರಕ್ರಿಯೆ. ಆದರೆ ಪೂರ್ಣ ಗುಣವಾಗಿರಲಿಲ್ಲ. 'ಇನ್ನೊಮ್ಮೆ ಆಪರೇಶನ್ ಮಾಡಬೇಕು? ಆದರೆ ಇವರ ಮೈಯಲ್ಲಿ ರಕ್ತವೇ ಇಲ್ಲ! ಪ್ರಾಣಕ್ಕೆ ಅಪಾಯವಾಗಬಹುದು', ಎಂಬ ಅಳುಕು. ಕುಟುಂಬದವರು, ವಿಶೇಷತಃ ಭಾವಮೈದ ಜನಾರ್ದನರಾವ್ "ಮಾಡಿ ಬಿಡಿರಿ. ದೇವರಿದ್ದಾನೆ" ಎಂದು ಧೈರ್ಯ ಹೇಳಿದರು. ಹುಬ್ಬಳ್ಳಿಯ ಕೆ.ಎಮ್.ಸಿ.ಯಲ್ಲಿ ಡಾ. ರಘು ಎರಡನೆಯ ಸಲ ಆಪರೇಶನ್ ಮಾಡಿದರು. ಮುಕ್ಕಾಲಾಂಶದ ಕರುಳನ್ನು ಕತ್ತರಿಸಲಾಯಿತಂತೆ. ಸತ್ತೇ ಹೋಗಿದ್ದ ಆಚಾರ್ಯರು ಮತ್ತೆ ಬದುಕಿದರು.

ಸುಮಾರು ಎರಡು ತಿಂಗಳ ಕಾಲ ಅವರು ಆಸ್ಪತ್ರೆಯಲ್ಲಿ ಕಳೆಯಬೇಕಾಗಿ ಬಂತು. ಅವರ ಪತ್ನಿ ಸದಾ ಬಳಿಯಲ್ಲೇ ಇರುತ್ತಿದ್ದರು. ಮಕ್ಕಳೂ ಅವರ ಬೇಕು ಬೇಡಗಳನ್ನು ಚೆನ್ನಾಗಿ

ನೋಡಿಕೊಂಡರು. ಡಾಕ್ಟರ್ ಮತ್ತು ನರ್ಸ್‌ಗಳಿಗೆ ಅವರ ಬಗ್ಗೆ ವಿಶೇಷ ಪ್ರೀತಿ. ಅವರನ್ನು ಕಾಣಲೆಂದು ನಿತ್ಯವೂ ಬರುತ್ತಿದ್ದ ಅಪಾರ ಜನಸಂಪದವನ್ನು ಕಂಡು ಇವರನ್ನು ಬದುಕಿಸದೇ ಹೋದರೆ ತಮ್ಮ ವೃತ್ತಿಗೇ ಅವಮಾನ ಮಾಡಿದಂತೆ ಎಂದು ಭಾವಿಸಿದ್ದರು.

ಮನೆಗೆ ಮರಳುವ ಮುನ್ನ ಆಚಾರ್ಯರು ಡಾಕ್ಟರರಿಗೆ ಕೃತಜ್ಞತೆ ಹೇಳ ಹೋದಾಗ ಮೇಲಿನಂತೆ ಹೇಳಿದುದಲ್ಲದೆ "ನಾವೇನೊ ನಮ್ಮ ಕರ್ತವ್ಯ ಮಾಡಿದೆವು. ನಿಜವೆಂದರೆ ನೀವು ಬದುಕಿದ್ದು ನಿಮ್ಮ ಮನೋಬಲದಿಂದ" ಎಂದರಂತೆ. ಆಚಾರ್ಯರು "ನೀವು ಶ್ರಮಪಟ್ಟು ಬದುಕಿಸಿದ್ದರಿಂದ ನನ್ನ ಜೀವನ ಇನ್ನಷ್ಟು ಅರ್ಥಪೂರ್ಣವೆನಿಸಿದೆ" ಎಂದು ಉತ್ತರಿಸಿದರು.

೧೯೭೫ ಜನವರಿ ೧೫- ಕಸ್ತೂರಿಯ ಸಂಪಾದಕತ್ವದಿಂದ ಹಾಗೂ ಲೋಕಶಿಕ್ಷಣ ಸಂಸ್ಥೆಯ ನೌಕರಿಯಿಂದ ನಿವೃತ್ತಿ.

೧೯೭೫-೧೯೯೧ ಕಸ್ತೂರಿಯಲ್ಲಿ 'ಪದಾರ್ಥ ಚಿಂತಾಮಣಿ'ಯನ್ನು ಮುಂದುವರಿಸಿದರು. ಇತರ ಪತ್ರಿಕೆಗಳಿಗೆ ಅಭ್ಯಾಸಪೂರ್ಣವಾದ ಚಿಂತನಪರ ಲೇಖನಗಳನ್ನು ಬರೆಯುತ್ತಿದ್ದರು.

೧೯೮೦ ಜುಲೈ - 'ಮಾನವ ಪ್ರವೃತ್ತಿ ಮತ್ತು ಮೌಲ್ಯಗಳು' ಎಂಬ ಅವರ ಚಿಕ್ಕ, ಆದರೆ ವಿಷಯ ಪರಿಪ್ಲುತವಾದ ಪುಸ್ತಕವನ್ನು ಉಡುಪಿಯ ಸರಸ್ವತಿ ಏಜನ್ಸಿಯವರು ಪ್ರಕಟಿಸಿದ್ದಾರೆ.

೧೯೯೧ - 'ಮಂಜೂಷಾ' ಎಂಬ ಪ್ರಬಂಧಗಳ ಸಂಕಲನದ ಪ್ರಕಟಣೆ - ಸುರೇಂದ್ರ ದಾನಿಯವರ ಪ್ರಯತ್ನ. ಬಿಡುಗಡೆ - ಹಾ.ಮಾ. ನಾಯಕರಿಂದ.

೧೯೯೨ - ಬಿ.ಡಿ. ಗೋಯೆಂಕಾ ಪ್ರಶಸ್ತಿಯ ಪ್ರದಾನ (ಒಂದು ಲಕ್ಷ ರೂ.) ಆದರೆ ಸಮಾರಂಭ ಮುಂದೆ ಹೋದದ್ದು.

೧೯೯೩ ಏಪ್ರಿಲ್ ೪ - ಪಾವೆಂ ಅವರ ಅಂತ್ಯ. ಹೀಗಾಗಿ ಎರಡನೆಯ ಬಾರಿ ಕರೆದ ಆ ಸಮಾರಂಭಕ್ಕೆ ಅವರು ಹೋಗಲಿಲ್ಲ.

ಸನ್ಮಾನ - ಪ್ರಶಸ್ತಿಗಳು

೧೯೭೫ - ಹುಬ್ಬಳ್ಳಿಯ ಮೂರು ಸಾವಿರ ಮಠದಿಂದ ವಿಶೇಷ ಸನ್ಮಾನ.

೧೯೮೮ ಏಪ್ರಿಲ್ - ಕನ್ನಡ ಸಾಹಿತ್ಯ ಪರಿಷತ್ತಿನಿಂದ ವಜ್ರಮಹೋತ್ಸವ ಪದಕ.

೧೯೮೮ ಮೇ - ಟಿ.ಆರ್. ರಾಮಯ್ಯ ಪ್ರಶಸ್ತಿ: ಮಂಗಳೂರಲ್ಲಿ ನಡೆದ ಅಖಿಲ ಕರ್ನಾಟಕ ಕಾರ್ಯನಿರತ ಪತ್ರಿಕೋದ್ಯೋಗಿಗಳ ಸಮ್ಮೇಳನದಲ್ಲಿ.

೧೯೭೭ ಸೆಪ್ಟೆಂಬರ್ ೧೦- ಮೈಸೂರಲ್ಲಿ ಸಾರ್ವಜನಿಕ ಸನ್ಮಾನ ಹಾಗೂ "ಪಾ.ವೆಂ ಕಸ್ತೂರಿ" ಎಂಬ ಸಂಭಾವನಾ ಗ್ರಂಥದ ಸಮರ್ಪಣೆ. (ಸನ್ಮಾನ ಸಮಿತಿಯಲ್ಲಿ ಇದ್ದವರು: ಸರ್ವಶ್ರೀ ಜಿ. ಟಿ. ನಾರಾಯಣರಾವ್, ಯು. ಆರ್. ಅನಂತಮೂರ್ತಿ, ಎಚ್. ಜಯದೇವ, ಜಿ.ಎಸ್ ಭಟ್ಟ, ಎಚ್ಚೆಸ್ ಕೃಷ್ಣಸ್ವಾಮಿ, ಎಸ್. ಎಲ್. ಭೈರಪ್ಪ, ಮುಂತಾದವರು.)

೧೯೮೧ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ.

೧೯೮೧ ಮೂಡಬಿದಿರೆಯ ವರ್ಧಮಾನ ಪ್ರಶಸ್ತಿ ಪೀಠದಿಂದ ಪ್ರಶಸ್ತಿ.

೧೯೮೭ ಜನವರಿ - ಮೂಲ್ಕಿಯಲ್ಲಿ ದ. ಕ. ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ

೧೯೮೯ ನವೆಂಬರ್ ೧ - ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ.

೧೯೯೨ - ಪತ್ರಿಕೋದ್ಯಮಕ್ಕಾಗಿ ಅಖಿಲ ಭಾರತ ಮಟ್ಟದ ಗೋಯೆಂಕಾ ಪ್ರಶಸ್ತಿ. (ಮೊದಲ ಬಾರಿ ಕನ್ನಡಿಗನಿಗೆ)



# ೨. ವ್ಯಕ್ತಿತ್ವ

'ತೀರಾ ಸಣಕಲು ದೇಹ. ಕಣ್ಣಿಗೊಂದು ದಪ್ಪ ಕನ್ನಡಕ, ಬಾಚಣಿಕೆಯನ್ನೇ ಕಾಣದ ಕೆದರಿದ ತಲೆಗೂದಲು, ನಕ್ಕರೆ, ಹಲ್ಲಿನ ಜೊತೆಗೆ ಮೂಗೇ ಎದ್ದು ಕಾಣಬೇಕು. ಆದರೆ ಯಾವುದೊಂದು ಚರ್ಚೆಗೆ ನಿಂತರೆಂದರೆ ಆ ವ್ಯಕ್ತಿಯ ದೈಹಿಕ ಲೋಪದೋಷಗಳನ್ನು ಎಳ್ಳಷ್ಟೂ ಗಣನೆಗೆ ತರಲಾರೆವು. ಅವರೊಡನೆ ಮಾತನಾಡಿ ಗೆದ್ದವರು ಯಾರೂ ಇಲ್ಲ. ಆದರೆ ಸೋತವರೂ ಇಲ್ಲ! ಅವರೊಡನೆಯ ಚರ್ಚೆ ಮುಗಿದಾಗ 'ಅರೆ! ಈ ವಿಚಾರ ನಮಗೆ ಹೊಳೀಲೆ ಇಲ್ಲವಲ್ಲ' ಎಂದುಕೊಳ್ಳುತ್ತೇವೆ' - ಅವರ ಸಹೋದ್ಯೋಗಿ ಸುರೇಂದ್ರ ದಾನಿ ಪಾವೆಂ. ಅವರ ವ್ಯಕ್ತಿತ್ವವನ್ನು ವರ್ಣಿಸಿದ್ದು ಹೀಗೆ.

ಗೀತಾ ಕುಲಕರ್ಣಿ ಅವರು ಗಮನಿಸಿದಂತೆ ಆಚಾರ್ಯರು ಕುರ್ಚಿಯ ಮೇಲೆ ಕುಳಿತಾಗ - ಅದು ಎಲ್ಲಿಯೇ ಇರಲಿ - ಬಿಡುವಿಲ್ಲದೆ ಕಾಲನ್ನು ಅಲ್ಲಾಡಿಸುತ್ತ. ಒಂದು ಕಾಲ ಮೇಲೆ ಇನ್ನೊಂದನ್ನು ಇರಿಸಿ, ಆಗಾಗ ಬದಲಿಸುತ್ತಾರೆ. ದೃಷ್ಟಿ ಎಲ್ಲೋ ನೆಟ್ಟಿರುತ್ತದೆ. ಬರಹದಲ್ಲಿ ಎಷ್ಟು ಸ್ಪಷ್ಟವೋ ಜನಸಂಪರ್ಕದಲ್ಲಿ ಅಷ್ಟೇ ಮುದುರಿಕೊಳ್ಳುವ ಸ್ವಭಾವ. ಕಾಯಿಲೆಯಿಂದಾಗಿ ಅಲ್ಪಾಹಾರಿಯಾಗಿ, ಗಾಳಿಯಲ್ಲಿ ತೇಲುವ ಹಗುರಾದ ದೇಹ ಹೊತ್ತರೂ ಮಾತಿನ ಕೆಚ್ಚು, ಕಣ್ಣಿನ ಹೊಳಪು, ಮೆದುಳಿನ ಶಕ್ತಿ ಎಲ್ಲವೂ ಮೊದಲು ಇದ್ದಂತೆಯೇ.

### ಓದು- ಕಲಿಕೆ

ಇದೊಂದು ಘಟನೆ. ನಿವೃತ್ತರಾಗಲಿರುವ ವಯಸ್ಸು. ಆಚಾರ್ಯರು ಸಾಮಾನ್ಯವಾಗಿ ೭-೩೦ಕ್ಕೆ ಆಫೀಸು ಬಿಡುತ್ತಾರೆ. ರಾತ್ರಿ ಓದಲೆಂದು ಕೈಯಲ್ಲೊಂದು ಪುಸ್ತಕ ಹಿಡಿದುಕೊಂಡು ಹೊರಡುವುದು ಅವರ ಕ್ರಮ. ಅರ್ಧ ತಾಸಿನಲ್ಲಿ ಮನೆಯಲ್ಲಿರುವುದು ನಿತ್ಯದ ರೂಢಿ. ಒಂದು ದಿನ ಅವರು ರಾತ್ರಿ ೮-೩೦ ಆದರೂ ಮನೆಗೆ ಬಂದಿರಲಿಲ್ಲ. ಆಫೀಸಿನಲ್ಲಿ ವಿಚಾರಿಸಿದಾಗ ತಿಳಿಯಿತು- ಅವರು '೭ ಗಂಟೆಗೇ ಹೋಗಿದ್ದಾರೆ!' ಅರೆ, ಎಲ್ಲಿ ಹೋದರು? ಏನಾದರೂ ಎಕ್ಸಿಡೆಂಟ್ ಆಯಿತೆ? ಎಂದು ಗಾಬರಿಗೊಂಡು ಹಿರಿಯ ಮಗ ಮುರಲೀಧರ ಹುಡುಕುತ್ತ ಹೊರಟರು.

ಆಹಾ! ದಾರಿಯ ಒಂದು ಇಲೆಕ್ಟ್ರಿಕ್ ದೀಪಕ್ಕೆ ಆತುಕೊಂಡು ಆ ಬೆಳಕಿನಲ್ಲಿ ತಾವು ತಂದಿದ್ದ ಪುಸ್ತಕವನ್ನು ಓದುತ್ತಾ ಇದ್ದಾರೆ!

ಓದುವ ಅತಿ ಹುಚ್ಚು ಅವರಿಗೆ ಮೊದಲಿನಿಂದಲೂ ಇತ್ತು. ವರ್ತಮಾನ ಪತ್ರದ ಒಂದು ಹರಿದು ಹೋದ ತುಂಡು ಕಾಗದವು ರಸ್ತೆಯಲ್ಲಿ ಬಿದ್ದಿದ್ದರೆ ಅದನ್ನು ಎತ್ತಿಕೊಂಡರೇ! ತುಸು ಕಣ್ಣಾಡಿಸಿ, ಕಿಂಚಿತ್ ಉಪಯೋಗದ್ದು ಏನಾದರೂ ಇದ್ದರೆ, ಕೈಚೀಲದಲ್ಲಿ ತುರುಕಿಕೊಳ್ಳುವುದನ್ನು ನಾನೇ ಒಮ್ಮೆ ನೋಡಿದ್ದೇನೆ. ಇದು ತನ್ನ ಬಾಲ್ಯಕಾಲದ ಅಭ್ಯಾಸವೆಂದು ನನಗೆ ಆಗ ಹೇಳಿದ್ದರು.

ಅವರ ಓದು ಮೆಟ್ರಿಕ್ಕಿನ ಹೊಸಲು ದಾಟಿ ಮುಂದೆ ಹೋಗಲಿಲ್ಲವಷ್ಟೆ. ಆದರೆ ಕಲಿಕೆ ಎನ್ನುವುದು ತಡೆದು ನಿಲ್ಲಲಿಲ್ಲ. ಅವ್ಯಾಹತವಾದ ವಾಚನದ ಮೂಲಕವೇ ವಿದ್ವತ್ತಿನ ಹೊಸಲಲ್ಲಿ ಬಂದು ನಿಂತರು. ಅದೇನೂ ವ್ಯವಸ್ಥಿತ ಓದು ಅಲ್ಲ. ಕೈಗೆ ಸಿಕ್ಕಿದ್ದನ್ನು ಓದುತ್ತಿದ್ದರೂ ಅವರ ಮನದಲ್ಲಿ ವಿಚಾರಗಳು ಕಂಪ್ಯೂಟರ್ ಶೇಖರಣೆಯಂತೆ ವ್ಯವಸ್ಥಿತವಾಗಿ ಉಳಿಯುತ್ತಿದ್ದವು. ಬೇಕೆಂದಾಗ ಥಟ್ಟನೆ ಹೊರತೆಗೆಯುವ ಅದ್ಭುತ ನೆನಪಿನ ಶಕ್ತಿ ಅವರದಾಗಿತ್ತು.

ಜೊತೆಗೆ ಇಂಥದೊಂದನ್ನು ಕಲಿಯಬೇಕು ಎನಿಸಿದರೆ ಏನೇ ಅಡಚಣೆಗಳಿದ್ದರೂ ಕಲಿಯುವ ಛಲ ಅವರದು. ಪಣಿಯಾಡಿಯವರಲ್ಲಿದ್ದಾಗ ಅಕೌಂಟನ್ಸಿ ತಿಳಿದಿರಬೇಕಿತ್ತು. ಸರಿ, ಅಂಥದೊಂದು ಪಠ್ಯ ಪುಸ್ತಕ ತಂದು ಕಲಿತರು. ರವೀಂದ್ರರ ಗೀತಾಂಜಲಿಗೆ ನೋಬೆಲ್ ಪ್ರೈಜ್ ಬಂದಿತ್ತಲ್ಲವೆ. ಹಾಗಿದ್ದರೆ ತಾನು ಬಂಗಾಲೀ ಕಲಿತು ಅದನ್ನು ಓದಬೇಕು; ಸಾಧ್ಯವಾದರೆ ಅನುವಾದಿಸಬೇಕು ಎಂಬ ಛಲ ಮೇಲ್ಬಾಯ್ದು ಬಂತು. ಯಾವುದೋ ಒಂದು ಔಷಧದ ಬಹುಭಾಷಾ ವಿವರಣೆಯು ಬಂಗಾಲಿಯಲ್ಲಿಯೂ ಇತ್ತು. ಅವಷ್ಟೇ ಅಕ್ಷರಗಳನ್ನು ರೂಢಿ ಮಾಡಿಕೊಂಡರು. ಕಲಕತ್ತೆಯಿಂದ ಬಂಗಾಲೀ ಪ್ರೈಮರ್ ತರಿಸಿಕೊಂಡರು. ಕಲಿತರು. ಇವೆಲ್ಲ ಹೈಸ್ಕೂಲಿನ ಕೊನೆಯ ಹಂತದಲ್ಲಿದ್ದಾಗ ನಡೆದದ್ದು. ಹೈಸ್ಕೂಲಿನಲ್ಲಿ ಕಲಿಯುವ ಕಾಲಕ್ಕೆ ಪಠ್ಯ ಪುಸ್ತಕಗಳು ಇರುತ್ತವಲ್ಲವೆ. ವರ್ಷದ ಆರಂಭದಲ್ಲಿ ಒಮ್ಮೆ ಓದಿಬಿಟ್ಟರೆ ಮುಗಿಯಿತು. ಪರೀಕ್ಷೆ ಹತ್ತಿರ ಬಂದಾಗಲೇ ಎರಡನೆಯ ಸಲ ಅವನ್ನು ತೆರೆಯೋದು. ಮಧ್ಯದ ಅವಧಿಯಲ್ಲಿ ಅನ್ಯ ಪುಸ್ತಕಗಳ ಓದಿನ ಹುಚ್ಚಿನಲ್ಲಿ. ಮಾಸ್ತರರು ಹೋಂವರ್ಕ್ ಕೊಟ್ಟಿದ್ದನ್ನು ಮಾಡಲು ಮರೆತುಬಿಟ್ಟು ಶಿಕ್ಷೆಗೊಳಗಾದ ಪ್ರಸಂಗಗಳೂ ಆಗಿಹೋದುವು. ಅಂತೂ ಶಾಲಾಶಿಕ್ಷಣ ಮುಗಿಯುವ ಹಂತದಲ್ಲಿ ಯಾವುದೇ ವಿಷಯವನ್ನು ಓದಿ ಮನನ ಮಾಡಿಕೊಳ್ಳುವೆನೆಂಬ ಆತ್ಮ ವಿಶ್ವಾಸ. ಹಾಗೆ ವಿಶೇಷ ಪರಿಣತಿಯನ್ನು ಹೊಂದಿದ್ದರಲ್ಲಿ ಹಳಗನ್ನಡ ಸಾಹಿತ್ಯವನ್ನೂ ಅದಕ್ಕೆ ಸಂಬಂಧಿಸಿದ ವ್ಯಾಕರಣ ಛಂದಶ್ಶಾಸ್ತ್ರಗಳನ್ನೂ ಶಾಲಾ ದಿನಗಳಲ್ಲಿಯೇ ಚೆನ್ನಾಗಿ ಓದಿಕೊಂಡಿದ್ದರು.

ಆ ಕಾಲದ ಓದಿನ ಪರಿಣಾಮವೆಂದರೆ ತಾನೂ ಕವಿತೆ ಬರೆಯಬೇಕು ಎನ್ನುವ ಸಹಜ ಭಾವನೆ ಮೂಡಿ ಬಂದದ್ದು. ತಮ್ಮ ಹಿತ್ತಲಿಗೆ ಬಂದಿದ್ದ ಕೋಳಿಯನ್ನು ನೋಡಿ-

ಬಂದಿತಾದರೆ ಕೋಳಿ ಇಲ್ಲಿಗೆ
ಕೊಂದು ಬಿಸುಡುವೆನದನು ಜಾಗ್ರತೆ-
ಯಿಂದ ಇರಿರೈ ಕೋಳಿ ಸಾಕುವರೆಲ್ಲರವನಿಯಲಿ.

- ಎಂದು ಕವಿತೆ ಹೊಸೆದದ್ದು ಪರಿಚಿತ ವಿಷಯ. ಅದರಂತೆ ಭಾಂಡಾರಕರ ಎಂಬ ಮಾಸ್ತರರು ಛಂದಸ್ಸಿನ ವೃತ್ತಗಳನ್ನು ಓದಿದ್ದರ ಪರಿಣಾಮವಾಗಿ ಕಂದ, ಷಟ್ಪದಿಗಳಲ್ಲಿ ಏನೇನೊ ಪದ್ಯ ಬರೆದರು. ಬಂಗಾಲಿ ಬರುತ್ತದೆ ಎನ್ನುವ ಉಮೇದಿನಲ್ಲಿ ರವೀಂದ್ರರ ಗೀತಾಂಜಲಿಯನ್ನೂ ಅನುವಾದಿಸಬೇಕೆನ್ನುವಷ್ಟು ಉತ್ಸಾಹ.

ಪಣಿಯಾಡಿಯವರ ಸಂಸ್ಥೆಯನ್ನು ಸೇರಿದ್ದ ಕಾಲದಲ್ಲಿ ಪ್ರಕಟನ ಯೋಗ್ಯವಾದ ಕವಿತೆಯನ್ನು ಬರೆಯತೊಡಗಿದರು. ಜಯಕರ್ನಾಟಕ, ಪ್ರಬುದ್ಧ ಕರ್ಣಾಟಕದಂತಹ ಮೇಲ್ಮಟ್ಟದ ಪತ್ರಿಕೆಗಳಲ್ಲಿ ಪ್ರಕಟಗೊಂಡಿದ್ದವು. `ಅಂತರಂಗ' ಪತ್ರಿಕೆಯಲ್ಲಿ ಅವರ ಕತೆಗಳೂ ಪ್ರಕಟವಾದುವು. ಅಂತೂ ತರುಣ ವಯದಲ್ಲಿ ಅವರು ಧಾರವಾಡದಲ್ಲಿ ಕಾಲಿಟ್ಟಾಗ ಇವರೊಬ್ಬ ಕವಿಗಳು ಮತ್ತು ಕತೆಗಾರರು ಎಂಬ ಅಂಶ ಕೆಲವರಿಗಾದರೂ ವೇದ್ಯವಾಗಿತ್ತು. ಸಂಯುಕ್ತ ಕರ್ನಾಟಕದ ಕಚೇರಿಗೆ ಬಂದಮೇಲಂತೂ ಅವರ ಓದಿನ ಮೂಲಕವಾದ ಕಲಿಕೆ ಅದ್ಭುತ ರೀತಿಯಲ್ಲಿ ಮುಂದೆ ಸಾಗಿತು. ಕೆಲವೇ ವರ್ಷಗಳಲ್ಲಿ ಅವರನ್ನು `ಸರ್ವಜ್ಞಾಚಾರ್ಯ' ಎಂದು ಪರಿಚಿತರು ಕರೆಯುವಂತಾಯಿತು. ಆ ಮುಂದೆ `ಜೀವಂತ ವಿಶ್ವಕೋಶ' ಎಂದವರೂ ಇದ್ದಾರೆ. ಇವೆರಡೂ ಅರ್ಧ ಸತ್ಯದವು. ಕೊನೆಗಾಲದವರೆಗೂ ತಾನು ತಿಳಿದುಕೊಳ್ಳುವುದು ಇನ್ನೂ ಬಹಳಷ್ಟಿದೆ ಎಂದು ಅವರು ಕುತೂಹಲಿಗಳಿದ್ದಾಗ `ಸರ್ವಜ್ಞ' ಪದ ಅದೆಂತು ಅನ್ವಯಿಸೀತು? `ವಿಶ್ವಕೋಶ' ಎಂದರೆ ವಿಶ್ವದಲ್ಲಿ ಇದ್ದಂಥ ಮಾಹಿತಿಯನ್ನು ಕೊಡುತ್ತದೆ. ಆದರೆ ಪಾವೆಂ ಸಕೃತ್ ಆಗಿ ಇಲ್ಲದಂತಹ ಅನೇಕ ಹೊಸ ವಿಚಾರಗಳನ್ನೂ ಹೇಳಬಲ್ಲವರಾಗಿದ್ದರಲ್ಲ!

## ಸ್ವಭಾವದ ವೈಶಿಷ್ಟ್ಯ

ಅವರಲ್ಲಿಯ ಎದ್ದುಕಾಣುವ ಸ್ವಭಾವವೆಂದರೆ ಅಪ್ಪಟ ಪ್ರಾಮಾಣಿಕತೆ. ಮೋಸ, ಅನ್ಯಾಯ, ಸುಳ್ಳು- ಇಂಥವೆಲ್ಲ ಅವರಿಗೆ ಎಳ್ಳಷ್ಟೂ ಸೇರುತ್ತಿದ್ದಿಲ್ಲ. ಅವರು ಮದ್ರಾಸದಲ್ಲಿ ನೌಕರಿ ಹಿಡಿದಾಗ ಮಹಾಯುದ್ಧ ಅದೇ ಸುರುವಾಗಿತ್ತಷ್ಟೆ. ಹಿಟ್ಲರನು ದುರಾಸೆಯಿಂದ ಪೋಲೆಂಡನ್ನು ಮುತ್ತಿದನೆಂದು, ಆಚಾರ್ಯರಿಗೆ ಅವನ ಮೇಲೆ ಬ್ರಹ್ಮಾಂಡ ಕೋಪ. "ಇವನು ಸತ್ತುಹೋಗಲಿ" ಎಂದು ಕೈಯಲ್ಲಿ ಬಿಲ್ ಬರೆಯಲೆಂದು ಇದ್ದ ಲೇಖನಿಯಿಂದ ಗೀಚಿದ್ದರು!.

ಇದೊಂದು ಘಟನೆಯನ್ನು ಅವರ ಹಿರಿಯ ಮಗ ಮುರಲೀಧರರು ಈಚೆಗೆ ಹೇಳಿದ್ದು. ಒಮ್ಮೆ ತಂದೆ ಮಗ ದೊಡ್ಡ ಕ್ಯೂನಲ್ಲಿ ನಿಂತಿದ್ದರು. ಇವರ ಹಿಂದೆ ಒಬ್ಬ ಇದ್ದ. ಆಗ ಮತ್ತೊಬ್ಬ ನುಗ್ಗಿ ಆ ಹಿಂದಿನವನ ಮುಂದೆ ನಿಂತ. ಅವನು ಕ್ಯೂ ಮುರಿದು ಬಂದದ್ದನ್ನು ಕಂಡು ಆಚಾರ್ಯರು ಆಕ್ಷೇಪಿಸಿದರು. ``ನಿಮ್ಮ ಮುಂದೇನು ಬಂದು ನಿಂತಿಲ್ಲ; ನಿಮಗ್ಯಾಕೆ ಉಸಾಬರಿ?" ಎಂದು ಅವನು ಒರಟಾಗಿ ಉತ್ತರಿಸಿದಾಗ, ಆಚಾರ್ಯರು ತಮ್ಮ ಕೈಯಲ್ಲಿದ್ದ ಛತ್ರಿಯಿಂದ ಹೊಡೆಯಲೆಂದೇ ಸಿದ್ಧರಾದರು! ಆಗ ಮಗನು ಸಮಾಧಾನ ಹೇಳಬೇಕಾಯಿತು!

ಈ ಸತ್ಯ ಮತ್ತು ಪ್ರಾಮಾಣಿಕತೆಯೆ ಅವರನ್ನು ಗಾಂಧೀಜಿಯತ್ತ ತರುಣ ವಯದಿಂದಲೇ ಸೆಳೆಯಿತು. ತಮ್ಮ ಈ ಆದರಾಭಿಮಾನವನ್ನು, ಒಂದು ಕವಿತೆಯಲ್ಲಿ ಬಿಟ್ಟರೆ ಲೇಖನದಲ್ಲಿಯಾಗಲೀ, ಮಾತಿನಲ್ಲಾಗಲೀ ವಿಶೇಷವಾಗಿ ತೋರಿಸಿರಲಿಲ್ಲ. ಆದರೆ ಗಾಂಧೀಜಿ ಹತ್ಯೆಯ ಸುದ್ದಿ ತಿಳಿದು ಅವರ ಮನಸ್ಸಿಗಾದ ನೋವು ಅಷ್ಟಿಷ್ಟಲ್ಲ. ಅದೇ ದುಃಖದಿಂದ ಆ ರಾತ್ರಿ ಮನೆಗೆ ಬಂದಮೇಲೆ ಸೂತಕವಾದಂತೆ ಸ್ನಾನ ಮಾಡಿದರಂತೆ. ಅದನ್ನು ನೆನೆದು ಅವರ ಪತ್ನಿ ಹೀಗೆ ದಾಖಲಿಸಿದ್ದಾರೆ:

"ನಮ್ಮ ಮಕ್ಕಳಲ್ಲಿ ಒಂದು ತನ್ನ ಒಂದೂವರೆ ವಯಸ್ಸಿನಲ್ಲಿ ತೀರಿಕೊಂಡಿತ್ತು. ಇವರು ಅಳಲಿಲ್ಲ. ಆದರೆ ಆ ಮಗು ತೀರಿಕೊಂಡ ಕೆಲ ತಿಂಗಳಲ್ಲಿ ಒಂದು ಸಂಜೆ ಮುಖ ಒಣಗಿಸಿಕೊಂಡು ಬಂದು ತಣ್ಣೀರು ಸ್ನಾನ ಮಾಡಿದರು. ಊಟ ಬೇಡ, ಎಂದರು. ಯಾಕೆ? ಅಂತ ಕೇಳಿದೆ. "ಗಾಂಧಿಯನ್ನು ಕೊಂದರು" ಎಂದರು. ಮರುದಿನ ಸಂಜೆ ರೇಡಿಯೋದಲ್ಲಿ ಗಾಂಧೀ ಚಿತಾರೋಹಣದ ಸುದ್ದಿ ಬರುತ್ತಿದ್ದಾಗ ಗೋಳೋ ಎಂದು ಅತ್ತುಬಿಟ್ಟರು."

ಅವರ ಬಗ್ಗೆ ಲೇಖ ಬರೆದ ಒಬ್ಬರು "ವಾವೆಂ ಸ್ಥಿತಪ್ರಜ್ಞರು" ಎಂದಿದ್ದಾರೆ. ಭಗವದ್ಗೀತೆಯಲ್ಲಿ ಬಂದ ಆ ಶಬ್ದ ಎಲ್ಲರಿಗೂ ಅನ್ವಯಿಸುವಂಥದಲ್ಲ. ಪಾವೆಂ ಬಗ್ಗೆ ಅನ್ವಯಿಸಿ ಹೇಳುವುದಾದರೆ ಅವರು ಸುಖ, ದುಃಖ ಎರಡನ್ನೂ ನಿರ್ಮೋಹದಿಂದ ಕಾಣಬಲ್ಲವರಾಗಿದ್ದರು. ಜನಗಳನ್ನು ಅತಿಯಾಗಿ ಹಚ್ಚಿಕೊಂಡವರಲ್ಲ. ಹಾಗೆಂದು ಸ್ನೇಹಪರ ನಡತೆಯುಳ್ಳವರಲ್ಲಿ ನಿರಾಸಕ್ತರೂ ಅಲ್ಲ. ಮುಖ್ಯತಃ ಕಸ್ತೂರಿಯ ನಿಮಿತ್ತದಿಂದ ಅವರ ಸ್ನೇಹದ ಬಳಗ ಬಲು ದೊಡ್ಡದಿತ್ತು. 'ಅವರು ವ್ಯಕ್ತಿಯಾಗಿ ವಾಮನ. ಸಾಹಿತಿಯಾಗಿ ತ್ರಿವಿಕ್ರಮ!'

ಅವರೊಬ್ಬ 'ಪಂಡಿತ ಪತ್ರಿಕೋದ್ಯಮಿ' ಎಂದು ಪಾಟೀಲ ಪುಟ್ಟಪ್ಪನವರು ಕರೆದದ್ದು ಅತ್ಯಂತ ಸಮಂಜಸವಾಗಿದೆ. ಪತ್ರಿಕೋದ್ಯಮ ವರ್ಗದಲ್ಲಿ ವಿದ್ವಾಂಸರೆಂಬವರು ಇರಲಾರರು. ಅದರಂತೆ ಪಂಡಿತರು ಪತ್ರಕರ್ತರೂ ಆಗುವುದು ಶಕ್ಯವಿಲ್ಲ. ಇವೆರಡೂ ಪರಸ್ಪರ ಹೊಂದಿಕೆಯಾಗದಂತಹವು. ಬನ್ನಂಜೆ ಗೋವಿಂದಾಚಾರ್ಯರೊಬ್ಬರು ಪಂಡಿತರಿದ್ದು ಯಶಸ್ವಿ

ಪತ್ರಿಕೋದ್ಯಮಿಯಾಗಿದ್ದರು. ಆದರೆ ಪಾವೆಂ ಪತ್ರಿಕೋದ್ಯಮದಲ್ಲಿದ್ದು ಅದಕ್ಕೆ ಸಮನಾಗಿ ಪಂಡಿತರೆನಿಸಿದರು.

ಅವರನ್ನು ಶಸ್ತ್ರಕ್ರಿಯೆಗಾಗಿ ಮಲಗಿಸಿದಾಗ ಡಾಕ್ಟರರು ಹೇಳಿದರು: "ದೇವರಲ್ಲಿ ಏನಾದರೂ ಬೇಡಿಕೊಳ್ಳುವುದಿದ್ದರೆ ಬೇಡಿಕೊಳ್ಳಿರಿ" ಎಂದು. ಅದಕ್ಕೆ ಪಾವೆಂ, "ನಾನೆಂದೂ ದೈವಭಕ್ತನಾಗಿಲ್ಲ. ನನ್ನದು ಯಾವಾಗಲೂ ತರ್ಕಬುದ್ಧಿ. ದೇವರೋ ಯಾವುದೇ ತರ್ಕಕ್ಕೆ ಅಧೀನನಲ್ಲ. "ಬೇರೊಂದು ಸಂದರ್ಭದಲ್ಲಿ ಆಚಾರ್ಯರು ಒಪ್ಪಿಕೊಂಡಿದ್ದಾರೆ. 'ಏನಾದರೂ ಸಮಸ್ಯೆ ಬಂದು ಬಗೆಹರಿಯದಿದ್ದರೆ ದೇವರತ್ತ ಮನಸ್ಸು ಹರಿಯುತ್ತದೆ. ಆದರೆ ಬಹಳ ಹೊತ್ತು ಅಲ್ಲಿ ನೆಲೆ ನಿಲ್ಲುವುದಿಲ್ಲ' ಎಂದು. ಹಾಗೆಂದು ಸಂಪ್ರದಾಯ ಎಲ್ಲವನ್ನೂ ಜರಿಯುವವರಾಗಿರಲಿಲ್ಲ.

ಪಾವೆಂ ಅವರ ಬರವಣಿಗೆಯ ಯಶಸ್ಸಿನ ಗುಟ್ಟು ಇದ್ದುದು- ಅವರ ಸ್ವವಿಮರ್ಶನ ಪ್ರಜ್ಞೆಯಲ್ಲಿ. ಅಂತರ್ಮುಖಿಯಾಗಿ ತಮ್ಮನ್ನು ವಿಮರ್ಶಿಸಿಕೊಳ್ಳಬಲ್ಲವರಾಗಿದ್ದರು. ಹಾಮಾನಾ ಅಭಿಪ್ರಾಯಿಸಿದಂತೆ ಅವರ ಬದುಕಿನಲ್ಲಿ ದ್ವಂದ್ವವೆಂಬುದು ಇರಲಿಲ್ಲ. ಅಧ್ಯಯನ ಬಲದಿಂದ ನಂಬಿದ್ದನ್ನು ಹೇಳುತ್ತಿದ್ದ ಬೌದ್ಧಿಕ ಪ್ರಾಮಾಣಿಕತೆ ಅವರಲ್ಲಿ ಯಥೇಷ್ಟವಾಗಿ ಇದ್ದಿತು.



## ೩. ಸಾಹಿತ್ಯ ರಚನೆಯ ಸ್ಥೂಲ ನೋಟ

ಪಾವೆಂ ಅವರ ಹೆಸರಿನ ಮೊದಲ ಪುಸ್ತಕ 'ಶ್ರೀರಾಮಪರ (ವಾದ)' ಹರಿಕೀರ್ತನೆಗಳು. ಶ್ರೀಮನ್ಮಧ್ವ ಸಿದ್ಧಾಂತ ಗ್ರಂಥಾಲಯದವರಿಗಾಗಿ ಸಂಪಾದಿತ; ೧೯೩೫ರಲ್ಲಿ. ಮರುವರ್ಷ 'ಕಾವ್ಯಸಾಮ್ರಾಜ್ಯ'ದ ಪ್ರಕಟನೆ. ಇದರಲ್ಲಿ ವಿವಿಧ ಕವಿಗಳ ೪೮ ಕವನಗಳಿದ್ದು ಕೆ. ಹೊನ್ನಯ್ಯ ಶೆಟ್ಟಿ ಅವರೊಂದಿಗೆ ಸಂಪಾದಿಸಿದ್ದು. ಅದರಲ್ಲಿ ಆಗಿನ ಎಲ್ಲ ಸುಪ್ರಸಿದ್ಧ ಕವಿಗಳ ಕವಿತೆಗಳಿವೆ. ಅದಕ್ಕೆ ಬಿ. ಎಂ. ಶ್ರೀ ಅವರ ಮುನ್ನುಡಿ ಇದೆ. ೧೯೫೩ರಲ್ಲಿ ಮರುಮುದ್ರಣ ಕಾಣುವಷ್ಟು ಉತ್ಕೃಷ್ಟ ಕವನ ಸಂಗ್ರಹ ಇದಾಗಿತ್ತು.

ಇಂಥದೇ ಅವರ ಸಂಪಾದನ ಕಾರ್ಯ ಸಣ್ಣಕತೆಗಳ ವಿಷಯವಾಗಿಯೂ ಕಂಡು ಬರುತ್ತದೆ. ಅದುವೆ 'ಅಂತರಂಗದ ಕಥೆಗಳು' (೧೯೪೦). ಇದು ಕೂಡಾ ಮರುಮುದ್ರಣ ಕಂಡಿತು -೧೯೫೩ರಲ್ಲಿ. ವಿಶೇಷವೆಂದರೆ ಇದರಲ್ಲಿ ಪಾವೆಂ ಅವರವೇ ಮೂರು ಕತೆಗಳಿವೆ.

ಹುಬ್ಬಳ್ಳಿಗೆ ಬಂದ ಮೇಲಿನ ಅವರ ಮೊದಲ ಪುಸ್ತಕ -ಬನಫೂಲ್ ಎಂಬ ಹಿಂದೀ ಲೇಖಕರ 'ವಾಸನಾ' ಕಾದಂಬರಿಯ ಅನುವಾದವು; ಮಿತ್ರ ಪಿ. ವೆಂಕೋಬರಾವ್ ಅವರ ಕೇಳಿಕೆಯ ಮೇರೆಗೆ (೧೯೫೦).

ಮುಂದೆ ಕರ್ಮವೀರದಲ್ಲಿ ಇವರ ಬರಹಗಳನ್ನು ಕಂಡಿದ್ದ ಬುರ್ಲಿ ಬಿಂದುಮಾಧವರು ತಮ್ಮ ಮಿಂಚಿನ ಬಳ್ಳಿ ಪ್ರಕಾಶನದಲ್ಲಿ `ರಶಿಯದ ರಾಜ್ಯಕ್ರಾಂತಿ'ಯ ಬಗ್ಗೆ ಗ್ರಂಥವನ್ನು ಬರೆಯಲು ಕೇಳಿಕೊಂಡರು. ಹ.ರಾ. ಪುರೋಹಿತರು, ಚೇಷ್ಟೆಯಲ್ಲಿ ಆಚಾರ್ಯರನ್ನು `ಕಮ್ಯೂನಿಷ್ಟ್' ಎಂದು ಕರೆಯುತ್ತಿದ್ದುದು. ಬುರ್ಲಿಯವರಿಗೆ ನೆಪವಾಯಿತೇನೊ! ಅಂತೂ ಪಾವೆಂ ಅವರ ಸ್ವತಂತ್ರ ಹಾಗೂ ಅಭ್ಯಾಸಪೂರ್ಣವಾದ ಮೊದಲ ಕೃತಿಯೆಂದರೆ ಇದೇ. (೧೯೪೩).

ಈ ವೇಳೆಗೆ ಒಂದು ಸಂಗ್ರಹವಾಗುವಷ್ಟು ಕವನಗಳನ್ನು ಆಗಾಗ ರಚಿಸಿದ್ದರು. `ನವನೀರದ' ಎಂಬ ಹೆಸರಿನಲ್ಲಿ ಅವರ ಆಪ್ತಮಿತ್ರರಾದ ದ.ಬಾ. ಕುಲಕರ್ಣಿಯವರು ತಮ್ಮ

ಲಲಿತ ಸಾಹಿತ್ಯ ಗ್ರಂಥಮಾಲೆಯಲ್ಲಿ ಪ್ರಕಟ ಮಾಡಿದರು. (೧೯೫೩) ಮರುವರ್ಷ ಆಗಿನ ಮುಂಬಯಿ ಸರಕಾರದವರು ಅದಕ್ಕೆ ಪುರಸ್ಕಾರವಿತ್ತರು.

ಅನಂತರದ್ದು 'ಪ್ರಹಾರ' ಎಂಬ ಹೆಸರಿನ ಹರಟೆಗಳ ಸಂಗ್ರಹ. ಆಫೀಸಿನ ವತಿಯಿಂದಲೇ ಅದು ಪ್ರಕಟವಾಯಿತು (೧೯೬೫). ನಗೆಬರಹಗಳ ಸಂಗ್ರಹವನ್ನು ಮೈಸೂರಿನ ಡಿ.ವಿ.ಕೆ. ಮೂರ್ತಿ ಅವರು 'ಲೋಕದ ಡೊಂಕು' (೧೯೭೬) ಮತ್ತು 'ವಿಪರೀತ' (೧೯೭೭) ಎಂಬ ಹೆಸರುಗಳಡಿಯಲ್ಲಿ ಪ್ರಕಟಿಸಿದರು. ಅವರ ನಾಲ್ಕನೆಯ ಹರಟೆಗಳ ಸಂಗ್ರಹದ ಹೆಸರು 'ವಕ್ರದೃಷ್ಟಿ'! ಪ್ರಕಟಿಸಿದವರು ಧಾರವಾಡದ ಸಮಾಜ ಪುಸ್ತಕಾಲಯದವರು (೧೯೯೦).

ಕ್ರಿ.ಶ. ೧೯೭೨ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂದು ೨೫ ವರುಷಗಳಾದುವು. ಈ ಅವಧಿಯಲ್ಲಿ ಭಾರತದ ಸಾಧನೆಯೇನೆಂಬ ಬಗ್ಗೆ ಪುಸ್ತಕ ಬರೆಯಿಸಬಹುದೆಂದು ಮುಂಬಯಿಯ ದ್ವೈಪಾಯನ ಟ್ರಸ್ಟಿನವರು ಯೋಚಿಸಿದರು. ಅದನ್ನು ಬರೆಯಲು ರಾಜಕೀಯ ವಿಶ್ಲೇಷಣೆ ಮಾಡಬಲ್ಲ ವ್ಯಕ್ತಿಯೇ ಆಗಬೇಕು. ಅದಕ್ಕಾಗಿ ಆರಿಸಿದ ವ್ಯಕ್ತಿ ಪಾ.ವೆಂ. ಆಚಾರ್ಯರೇ. ಪಾವೆಂ ವಸ್ತುನಿಷ್ಠವಾಗಿ ಸಿಂಹಾವಲೋಕನ ಮಾಡಿಕೊಟ್ಟಿದ್ದಾರೆ.

ಐ.ಬಿ.ಎಚ್. ಪ್ರಕಾಶನದವರು ಇಂದಿರಾ ಗಾಂಧಿ ಪ್ರಣೀತ ಇಪ್ಪತ್ತು ಅಂಶಗಳೊಂದೊಂದರ ಮೇಲೆ ಪುಸ್ತಕ ಬರೆಯಿಸಬೇಕೆಂದು ಯೋಚಿಸಿದರು; ಪಾವೆಂ. ಆಚಾರ್ಯರು ಆ ಮಾಲೆಗೆ ಒಂದು ಪುಸ್ತಕ ಬರೆದುಕೊಡಬೇಕೆಂದು ಕೇಳಿಕೊಂಡರು (೧೯೭೭). ಕೊಟ್ಟ ವಿಷಯ 'ಕಳ್ಳಸಾಗಣೆದಾರರ ನಿರ್ಮೂಲನ!' ಚಿಕ್ಕದಾದರೂ ಅಂಕಿಸಂಖ್ಯೆಗಳೊಡನೆ ವಸ್ತುನಿಷ್ಠವಾಗಿ ವಿವೇಚಿಸಿದ್ದಾರೆ.

ಅದರಂತೆ ರಾಷ್ಟ್ರೋತ್ಥಾನ ಸಂಸ್ಥೆಯವರ ಕೇಳಿಕೆಯ ಮೇರೆಗೆ ಮಹಾರಾಷ್ಟ್ರದ ಅಗ್ರಗಣ್ಯ ಸಮಾಜ ಸುಧಾರಕರಾಗಿದ್ದ 'ಗೋಪಾಲ ಗಣೇಶ ಅಗರಕರ್' ಅವರ ಚರಿತ್ರೆಯನ್ನು ಎಳೆಯ ಓದುಗರಿಗಾಗಿ ಬರೆದುಕೊಟ್ಟರು (೧೯೭೭).

೧೯೭೯ರಲ್ಲಿ 'ತುಳಸಿಯ ಉದರ' ಎಂಬ ವಿಶಿಷ್ಟ ವಾರ್ಷಿಕ ಪ್ರಕಟವಾಗತೊಡಗಿತು. ಹುಬ್ಬಳ್ಳಿಯಲ್ಲಿಯ ಕುಮಾರವ್ಯಾಸ ಸೇವಾ ಸಂಘದವರು ಕುಮಾರವ್ಯಾಸನ ಅಭ್ಯಾಸವನ್ನು ಗಮನದಲ್ಲಿಟ್ಟುಕೊಂಡು ಅದನ್ನು ಹೊರಡಿಸುತ್ತಿದ್ದಾಗ ಅದರ ೨ನೆಯ ವಾರ್ಷಿಕ ಸಂಪುಟಕ್ಕೆ ಪಾವೆಂ. ಆಚಾರ್ಯರು ಗೌರವ ಸಂಪಾದಕರಾಗಬೇಕೆಂದು ಕೇಳಿಕೊಂಡರು. ಅದರಲ್ಲಿ ಕುಮಾರವ್ಯಾಸನ ಬಗ್ಗೆ ಪಾವೆಂ. ಅವರದೇ ಮೌಲಿಕ ಲೇಖನವಿದೆ.

ಪಾವೆಂ. ತರುಣ ವಯದಲ್ಲಿ ಎಂದರೆ ಉಡುಪಿಯಲ್ಲೇ ಇದ್ದಾಗ ತಾಯ್ನುಡಿಯಾದ ತುಳುವಿನಲ್ಲಿ ಕೆಲವೇ ಕವಿತೆಗಳನ್ನು ಬರೆದಿದ್ದರು. ಆಮೇಲೆ ಕನ್ನಡದಲ್ಲಿ ಬರೆದ 'ಗೋಪಿ', 'ರಾಮದೇವರ ಸತ್ರ' ಮುಂತಾದ ಕೆಲವನ್ನು ತುಳುವಿಗೆ ಅನುವಾದಿಸಿ ಒಂದು ಸಂಕಲನವನ್ನು ಸಿದ್ಧಪಡಿಸಿದರು. ಅದಕ್ಕಿಟ್ಟ ಹೆಸರು 'ಬಯ್ಯಮಲ್ಲಿಗೆ' (೧೯೮೬). ಅದರ ಅಪೂರ್ವತೆಯನ್ನು ಮನಗಂಡು ಕರ್ನಾಟಕ ತುಳು ಅಕಾಡೆಮಿಯವರು ಈಚೆಗೆ ಅದನ್ನು ಮರುಮುದ್ರಿಸಿದ್ದಾರೆ (೨೦೦೩).

ಸಂಸ್ಕೃತದಲ್ಲಿ ಸುಭಾಷಿತಗಳು -ಚುಟುಕುಗಳು ಸಹಸ್ರಾರು ಇವೆ. ಕಿರಿದರಲ್ಲಿಯೇ ಸ್ವಾರಸ್ಯವನ್ನು ಕಾಣಬಲ್ಲ ಆಚಾರ್ಯರು ಅವುಗಳನ್ನು ಓದಿಯೇ ಇದ್ದರು. ೧೯೭೫ರಲ್ಲಿ ಪಾವೆಂ. ಅವರಿಗೆ ಗಂಭೀರ ಸ್ವರೂಪದ ಕಾಯಿಲೆಯಾಗಿ ಸತ್ತು ಬದುಕಿದರಷ್ಟೆ. ಕಸ್ತೂರಿಯ ಕೆಲಸವಂತೂ ಇಲ್ಲ. ಬೌದ್ಧಿಕ ಶೂನ್ಯತೆಯನ್ನು ಕಳೆದುಕೊಳ್ಳಲು ಅವರು ಈ ಸುಭಾಷಿತಗಳನ್ನು ಅನುವಾದಕ್ಕಾಗಿ ಆಯ್ದುಕೊಂಡರು. ಉಳಿದ ಅನೇಕರಂತೆ ಗದ್ಯದಲ್ಲಿ ಅಲ್ಲ, ಸ್ವತಂತ್ರ ರಚನೆಯೆಂಬ ರೀತಿಯಲ್ಲಿ ಕವನವಾಗಿಯೇ ರಚಿಸಿದ್ದಾರೆ. ತಾನು ಕೈಗೆ ಎಟಕಿದ್ದನ್ನು ಅನುವಾದಿಸಿದ್ದು, ಆಯ್ಕೆಯ ದೃಷ್ಟಿ ತಮ್ಮಲ್ಲಿ ಇದ್ದಿಲ್ಲವೆಂದು ಹೇಳಿದ್ದರೂ, ಉಪದೇಶಕ್ಕಿಂತ ಚಮತ್ಕೃತಿ ಇರತಕ್ಕುದೆಂದು ಯೋಚಿಸಿದರು. ಅದು ಅವರ ಸ್ವಭಾವಕ್ಕೆ ಹೊಂದುವಂತಹದೇ. ಇಲ್ಲಿಯ ೨೬೬ ಕನ್ನಡ ಸುಭಾಷಿತಗಳು ಮತ್ತೆ ಮತ್ತೆ ಆಸ್ವಾದಿಸಬೇಕೆಂದು ಅನಿಸುವಂತಿವೆ.

ಪಾವೆಂ. ಬದುಕಿದ್ದಾಗಿನ ಕೊನೆಯ ಗ್ರಂಥದ ಹೆಸರು 'ಮಂಜೂಷಾ' (೧೯೯೧) ವೈಚಾರಿಕ ಪ್ರಬಂಧಗಳಿರುವ ಗ್ರಂಥವಿದು. ಅದರಂತೆ ಅವರ ಕೊನೆಯ ಲೇಖ `ಸಂಯುಕ್ತ ಕರ್ನಾಟಕ'ದಲ್ಲಿ ಪ್ರಕಟವಾದ ಗೋಕಾಕರ ಮರಣದ ಕಾರಣದಿಂದ ಬರೆದದ್ದು.

'ಪದಾರ್ಥ ಚಿಂತಾಮಣಿ'ಯ ಕಂತುಗಳು ಕಸ್ತೂರಿಯಲ್ಲಿ ಬರತೊಡಗಿದುವಷ್ಟೆ. ಅವುಗಳ ಒಂದು ಕಟ್ಟನ್ನು ಮಂಗಳೂರಿನ ದತ್ತಾತ್ರೇಯ ಪ್ರಕಾಶನದವರು ಹೊರತಂದರು. ಅದರ ಎರಡನೆಯ ಭಾಗವನ್ನು ಸುಬ್ರಹ್ಮಣ್ಯದ ಪ್ರಮತಿ ಪ್ರಕಾಶನದವರು ಪ್ರಕಟಿಸಿದರು. ಮೂರನೆಯ ಭಾಗಕ್ಕೂ ತುಸು ಸಾಮಗ್ರಿಯ ಸಂಗ್ರಹವಾಗಿತ್ತು. ಅವರೆ ಅಷ್ಟರಲ್ಲಿ ಆಚಾರ್ಯರು ತೀರಿಕೊಂಡರು. ಅವೆರಡನ್ನೂ ಸೇರಿಸಿ ನವಕರ್ನಾಟಕದವರು ಸೊಗಸಾಗಿ ಹೊರತಂದಿದ್ದು, (೧೯೯೧) ಮೂರು ಆವೃತ್ತಿಗಳನ್ನು ಕಂಡಿದೆ.

ಪಾವೆಂ. ಅವರ ಒಟ್ಟಿನ ಕೃತಿ ಸಂಪದವನ್ನು ಗಮನಿಸಿದರೆ ಅವರ ಅಖಂಡ ವಾಚನದ ಪರಿಣಾಮವಾಗಿ, ಯಾವ ವಿಷಯವನ್ನು ಕೊಟ್ಟರೂ ಇಲ್ಲವೆ ಅವರೇ ಎಂಥದೇ ವಿಷಯವನ್ನು ಎತ್ತಿಕೊಂಡರೂ ಸಮರ್ಪಕವಾಗಿ ಬರೆಯಬಲ್ಲವರಾಗಿದ್ದರು. ಅದಕ್ಕೆ ಅವರ ವಿಡಂಬನ

ದೃಷ್ಟಿಯೂ ಸೇರಿ ಐದುನೂರರಷ್ಟು ಹರಟೆಗಳು ಹೊರಹೊಮ್ಮಿದುವು. ನಿವೃತ್ತಿ ಹೊಂದಿದ ಮುಂದಿನ ೧೫ ವರ್ಷಗಳಲ್ಲಿ ಮಾತ್ರ ಅವರು ಚಿಂತನಪರ ಲೇಖನಗಳನ್ನೇ ಹೆಚ್ಚಾಗಿ ಬರೆದರು. ಕಾದಂಬರಿ ಪ್ರಕಾರವನ್ನು ಹಾಗೂ ಸಿನೆಮಾ ಮತ್ತು ಕ್ರೀಡೆಗಳನ್ನುಳಿದು ಎಲ್ಲದರಲ್ಲಿಯೂ ಕೃಷಿಗೈದು, ಮೌಲಿಕ ವಿಚಾರಗಳನ್ನು ಮಂಡಿಸಿ ಕನ್ನಡ ಸಾಹಿತ್ಯ ಲೋಕದಲ್ಲಿ ಶಾಶ್ವತ ಸ್ಥಾನವನ್ನು ಉಳಿಸಿಕೊಂಡರು.

## ಮರಣಾನಂತರ ಪ್ರಕಟನೆ

ಅವರ ಮರಣಾನಂತರ, ಕ್ರಿ.ಶ. ೧೯೯೯ರಲ್ಲಿ `ಪಾವೆಂ. ವಿಶ್ವಸ್ತ ಸಮಿತಿ'ಯು ರಚಿತವಾಯಿತು. ಅದರಲ್ಲಿ ಅವರ ಮಕ್ಕಳಾದ ಶ್ರೀ ಮುರಲೀಧರ ಪಾಡಿಗಾರ ಹಾಗೂ ಶ್ರೀ ರಾಧಾಕೃಷ್ಣ ಆಚಾರ್ಯರು ವಿಶ್ವಸ್ತರಾದರು. ಪ್ರಸ್ತುತ ಲೇಖಕನೂ ಒಬ್ಬ ಟ್ರಸ್ಟೀ. ಅಲ್ಲದೆ ಪಾವೆಂ. ಅವರ ಸಮಗ್ರ ಕೃತಿಗಳನ್ನು ಸಂಪಾದಿಸಿ ವಿಷಯವಾರ ಸಂಪುಟಗಳಲ್ಲಿ ಪ್ರಕಟಿಸುವ ಯೋಜನೆಯನ್ನು ರೂಪಿಸಿದರು, ಈ ಕೆಲಸದಲ್ಲಿ ಉದ್ದಕ್ಕೂ ಜೊತೆಗೂಡಿದವರು ಪ್ರೊ. ಎಸ್ಸೆಲ್ ಶ್ರೀನಿವಾಸಮೂರ್ತಿಗಳು. ಹರಟೆಗಳ ಸಂಪಾದನ ಕಾರ್ಯದಲ್ಲಿ ಪ್ರೊ. ಅ.ರಾ. ಮಿತ್ರ ಅವರೂ ನೆರವಾಗಿದ್ದಾರೆ.



## ೪. ಕಸ್ತೂರಿ

ಕಸ್ತೂರಿಯ ಆರಂಭ ಕಾಲದಲ್ಲಿ ಹಾಗೂ ತುಸು ಅನಂತರದಲ್ಲಿ ಕೆಲವು ಡೈಜೆಸ್ಟ್ ಪತ್ರಿಕೆಗಳು ಮುಖ ತೋರಿಸಿದುವು. ಆದರೆ ಕೂಡಲೇ ನಿಂತುವಾದ್ದರಿಂದ ಪಾವೆಂ. ಅವರಿಗೆ ಕಸ್ತೂರಿಯನ್ನು ತಮಗಿಷ್ಟ ಬಂದಂತೆ ರೂಪಿಸಲು ದಾರಿ ನಿರರ್ಗಳವಾಗಿದ್ದಿತು. ಮೊದಲು ಅವರು ನಿರ್ಧರಿಸಬೇಕಾದದ್ದು ಯಾರಿಗಾಗಿ ಈ ಡೈಜೆಸ್ಟನ್ನು ಹೊರಡಿಸಬೇಕು? ಅವರು ನಿರ್ಧರಿಸಿಕೊಂಡರು: ಎಸ್.ಎಸ್. ಸಿ. ಪಾಸಾದವರು; ಆದರೆ ಇಂಗ್ಲೀಷ್ ಮೂಲಕ ಜ್ಞಾನ ವಿಜ್ಞಾನ ಮನೋರಂಜನೆ ಪಡೆಯದಿದ್ದವರು. ಅದಕ್ಕಾಗಿ ವರ್ತಮಾನವನ್ನು ಸೃಷ್ಟಿಸುತ್ತಾ ಭವಿಷ್ಯತ್ತಿನ ಮೇಲೆ ಕಣ್ಣಿರಿಸಿಕೊಂಡು ಸಾಗಬೇಕು. ಇದು ಅವರ ಸ್ಪಷ್ಟ ಧೋರಣೆಯಾಗಿತ್ತು.

ಮೊದಲೆರಡು ಸಂಚಿಕೆಗಳು ಪ್ರಕಟವಾದೊಡನೆ ಲೇಖನಗಳು ಹೊರೆಹೊರೆಯಾಗಿ ಬರತೊಡಗಿದವು. ಯಾವವು ಪ್ರಕಟವಾಗುವಂಥವು; ಯಾವವು ಅಲ್ಲ? ಇತರ ಅನೇಕ ಸಂಪಾದಕರು ಮಾಡುವಂತೆ ಬೇಡವಾದವುಗಳನ್ನು ಕಸದ ಬುಟ್ಟಿಗೆ ಎಸೆಯಬೇಕು. ಆದರೆ ಪಾವೆಂ. ಹಾಗೆ ಮಾಡುವ ಮುಂಚೆ ಆ ಲೇಖಕರಿಗೆ ನಿರಾಕರಣದ ಕಾರಣವನ್ನು ಚುಟುಕಿನಲ್ಲಿ ಬರೆದು ತಿಳಿಸುತ್ತಿದ್ದರು. ಪ್ರಕಟನ ಸಾಧ್ಯತೆಯಿರುವ ಲೇಖಗಳನ್ನು ಸಹಾಯಕ ಸಂಪಾದಕರಿಗೆ ಓದಗೊಟ್ಟು ಅಭಿಪ್ರಾಯ ಕೇಳುತ್ತಿದ್ದರು. ತಾವೂ ಕಣ್ಣಾಡಿಸುತ್ತಿದ್ದರು. ನೇರವಾಗಿ ಪ್ರಕಟನೆಗೆ ಎತ್ತಿಕೊಳ್ಳಬಹುದಾದವುಗಳು ತೀರಾ ಕಡಿಮೆ. ಕೆಲವನ್ನು ಲೇಖಕರಿಗೆ ಕಳಿಸಿ, ತಿದ್ದುಪಡಿ ಇಲ್ಲವೆ ಸುಧಾರಣೆ ಮಾಡಲು ಸೂಚಿಸುತ್ತಿದ್ದರು. ಇನ್ನು ಕೆಲವನ್ನು ತಾವೇ ತಿದ್ದಿ ಪತ್ರಿಕೆಗೆ ಸೇರಿಸಿಕೊಳ್ಳುತ್ತಿದ್ದರು. ವಿಜ್ಞಾನ ಅಥವಾ ಪ್ರಪಂಚದ ಇಲ್ಲವೆ ಪ್ರಚಲಿತ ವಿಷಯಗಳ ಲೇಖವಿದ್ದರೆ, ಲೈಬ್ರರಿಗಳಿಗೆ ಹೋಗಿ ಪೂರಕ ಮಾಹಿತಿಯನ್ನು ತುಂಬುತ್ತಿದ್ದರು. ಪ್ರತಿ ಸಂಚಿಕೆಯಲ್ಲಿ ವೈವಿಧ್ಯಮಯ ವಿಷಯಗಳು ಬರಬೇಕಲ್ಲವೆ. ಆ ಕಾರಣದಿಂದ ಪ್ರತಿ ಸಂಚಿಕೆಗೆ ತಾವೇ ೩-೪ ಲೇಖಗಳನ್ನು ಸಿದ್ಧ ಪಡಿಸುತ್ತಿದ್ದರು. ಲೇಖಕರ ಹೆಸರು? ರಾಧಾಕೃಷ್ಣರಾವ್, ಮುರಲೀಧರ - ಇತ್ಯಾದಿ ಮಕ್ಕಳ ಹೆಸರುಗಳು! ಜೊತೆಗೆ 'ವಿಚಾರಿ'. ಹೆಗಡೆಯವರವೂ ಒಂದೆರಡು ಇಂಥ ಲೇಖಗಳು ಇರಬೇಕು. ಅಂತೂ ಇಬ್ಬರೂ ದುರಾರಾಧ್ಯರಾಗಿದ್ದುದರಿಂದ, ನಾಲ್ಕು ಭಾಷೆಗಳಲ್ಲಿ ರಾಶಿ ರಾಶಿ ಓದಬೇಕು. ವೈಜ್ಞಾನಿಕ ಹಾಗೂ ಸಮಸಾಮಯಿಕ ಲೇಖನಗಳು ಇದ್ದರಂತೂ ಸಾಧ್ಯವಾದಷ್ಟು

ಆ ವಿಷಯದ ಆದಿ ಅಂತ್ಯ ಪರ್ಯಂತ ಬೆಳವಣಿಗೆಯನ್ನು ತಿಳಿದುಕೊಳ್ಳಲು ಯತ್ನಿಸಬೇಕು ಮತ್ತು ಅದರ ಸತ್ಯಾಸತ್ಯತೆಯನ್ನು ಸಾಧ್ಯವಿದ್ದಷ್ಟು ಸ್ಥಿರಪಡಿಸಿಕೊಳ್ಳಲು ಅವರು ತುಂಬಾ ಶ್ರಮ ತೆಗೆದುಕೊಳ್ಳುತ್ತಿದ್ದರು. ಹಾಗೆ ಮಾಡದೇ ಹೋದರೆ ಹೊರಗಿನಿಂದ ಬಂದ ಲೇಖಗಳನ್ನು ಸೂಕ್ತವಾಗಿ ಕತ್ತರಿಸಿಯೋ ಸೇರಿಸಿಯೋ ಸಮರ್ಪಕವಾಗಿಸುವುದು ಸಾಧ್ಯವಿರುತ್ತಿರಲಿಲ್ಲ. ಜೊತೆಗೆ ಆ ಲೇಖವು ಓದುಗರ ನಿರೀಕ್ಷೆಯನ್ನು ಮುಟ್ಟಬಲ್ಲುದೆಂದು ಖಾತ್ರಿಯಾಗುವ ತನಕ ಆ ಲೇಖ ಅಚ್ಚಿಗೆ ಹೋಗುತ್ತಿರಲಿಲ್ಲ. ಆ ನಿಟ್ಟಿನಲ್ಲಿ ಅವೆಷ್ಟೋ ಲೇಖಗಳು ಹೊಸ ಲೇಖಗಳಾಗಿಯೆ ಮೂಡಿರುತ್ತಿದ್ದವು. ಅಂತೂ ಲೇಖನಗಳು ಕಾಲಾನುಸಾರಿಯಾಗಿಯೂ ಆದಷ್ಟು ಶಾಶ್ವತ ಮೌಲ್ಯದವೂ ಎನಿಸಬೇಕಾದರೆ ಏನೇನೂ ಸುಲಭವಲ್ಲದ ಉದ್ಯೋಗವದು. ಕ್ರಮೇಣ ಕಸ್ತೂರಿಯ ಮಟ್ಟ ಇದೆಂದು ಎಣಿಸಿಕೊಂಡ ಒಂದು ಅಳತೆಗೋಲನ್ನು ರೂಪಿಸಿಕೊಂಡ ನಂತರ ಅದನ್ನು ಕಾಯ್ದುಕೊಳ್ಳಬೇಕೆಂಬ ಹಂಬಲ ಒಂದು ಅಂಕುಶವಾಗಿರುತ್ತಿತ್ತು. ಮಹತ್ವದ್ದೆಂದರೆ ಆ ಮಟ್ಟವನ್ನು ನಿರೀಕ್ಷಿಸುವ, ಈ ವಿಷಯದಲ್ಲಿ ಸ್ವಲ್ಪ 'ಢಿಲಾ' ಆದರೂ ಎಚ್ಚರಿಸುವ ಓದುಗರಿರುವ ಬಗ್ಗೆ ಸಂಪಾದಕರಿಗೆ ಒಂದು ಬಗೆಯ ಹೆಮ್ಮೆ ಮೂಡಿದ್ದರೆ ಆಶ್ಚರ್ಯವಲ್ಲ.

ಪ್ರಕಟವಾದ ಲೇಖನಗಳ ಬಗ್ಗೆ ಓದುಗರಲ್ಲಿ ಉದ್ಭವಿಸುತ್ತಿದ್ದ ಸಂಶಯಗಳನ್ನು ನಿವಾರಿಸಲು ಪತ್ರಮುಖೇನ ನೆರವಾಗುವುದೂ ಇತ್ತು. ಇದೊಂದು ಪ್ರಸಂಗ: ಸಂತತಿ ನಿಯಂತ್ರಣದ ಶಸ್ತ್ರಕ್ರಿಯೆಗೆ ಸಂಬಂಧಿಸಿದ ಒಂದು ಲೇಖನ ಪ್ರಕಟವಾಗಿತ್ತು. ಆರತಿ; ಕೀರುತಿ - ಇಬ್ಬರು ಮಕ್ಕಳು ಸಾಕು ಎಂಬ ಪರೋಕ್ಷ ಸೂಚನೆಯು ಅದರಲ್ಲಿದ್ದಿತು. ಒಬ್ಬ ಓದುಗರು ಎರಡು ಮಕ್ಕಳು ಹುಟ್ಟಿದ ಮೇಲೆ• ಶಸ್ತ್ರಕ್ರಿಯೆ ಮಾಡಿಸಿಕೊಂಡರು. ಆದರೆ ಹುಟ್ಟಿದ ಗಂಡುಮಗು ಅಂಗಹೀನವಾಗಿದ್ದಿತು. ಅವರು ಆರ್ತರಾಗಿ ಪತ್ರ ಬರೆದರು. ಆಗ ಪಾವೆಂ. ಸಂತಾನಹರಣ ಶಸ್ತ್ರಕ್ರಿಯಾ ತಜ್ಞರನ್ನು ವಿಚಾರಿಸಿ ಹೊಸದಾಗಿ ರೂಪಿಸಲಾಗಿದ್ದ ವೀರ್ಯನಾಳದ ಪುನರ್ಜೋಡಣೆಯ ವಿವರಗಳನ್ನು ತಿಳಿದು ಆ ತಂದೆಗೆ ತಿಳಿಸಿದರಂತೆ. ಅದರಂತೆ ಶಸ್ತ್ರಕ್ರಿಯೆ ಮಾಡಿಸಿಕೊಂಡು ಅವರು ಮತ್ತೊಂದು ಮಗುವನ್ನು ಪಡೆದುದಾಗಿ ಸಂಪಾದಕರಿಗೆ ಕೃತಜ್ಞತೆಯ ಪತ್ರ ಬರೆದರಂತೆ.

ಓದುಗರೊಡನೆಯ ಇಂಥ ಸಂಬಂಧ ಪಾವೆಂ. ಅವರ ಒಂದು ವಿನೂತನ ವಿಶಿಷ್ಟತೆ. ಇದರಂತೆ ಲೇಖಕರೊಡನೆಯೂ ಪಾವೆಂ. ಆಳವಾದ ಸಂಪರ್ಕ ಇಟ್ಟುಕೊಂಡಿದ್ದರು. ಹೊಸ ಹೊಸ ಲೇಖಕರನ್ನು ಸೃಷ್ಟಿಸಿದರು. ಅವರಲ್ಲಿ ಕೆಲವರು ಮುಂದೆ ಹಿರಿಯ ಲೇಖಕರಾದ ಸಂದರ್ಭಗಳು ಅನೇಕ. ಹೊಸಬರಲ್ಲಿ ಅವಿತಿದ್ದ ವೈಚಾರಿಕ ಶಕ್ತಿಯನ್ನು ಮತ್ತು ಬರವಣಿಗೆಯ ಸಾಮರ್ಥ್ಯವನ್ನು ಕಂಡು ಹಿಡಿಯಬಲ್ಲ ಗುಣ ಆಚಾರ್ಯರಲ್ಲಿದ್ದಿತು. ಹಾಗೆ ಆ ಹಲವು ಲೇಖಕರು ಕಸ್ತೂರಿಯಲ್ಲಿ ಸಿಕ್ಕಿದ ಅವಕಾಶವು ತಮ್ಮನ್ನು ಹುರಿದುಂಬಿಸಿತೆಂದು ಪ್ರಾಂಜಲವಾಗಿ ಒಪ್ಪಿಕೊಂಡಿದ್ದಾರೆ. ಸರ್ವಶ್ರೀ ಕು.ಶಿ. ಹರಿದಾಸಭಟ್ಟ, ಜಿ.ಟಿ. ನಾರಾಯಣರಾವ್, ಕೆ.ಟಿ.

ವೇಣುಗೋಪಾಲ, ಸಂತೋಷಕುಮಾರ ಗುಲ್ವಾಡಿ, ಸಂಜೀವರಾವ್, ಇನ್ನೂ ಹಲವರಿದ್ದಾರೆ. ಒಟ್ಟಿನಲ್ಲಿ ಆಚಾರ್ಯರು ಲೇಖಕರ ವಿಷಯದಲ್ಲಿ ಗುಣೈಕ ಪಕ್ಷಪಾತಿಗಳು ಮತ್ತು ನಿರ್ಭಿಡೆಯಿಂದ ತಮ್ಮ ವಿಧಾಯಕ ಸೂಚನೆಗಳನ್ನು ಕೊಡುತ್ತಿದ್ದರು. ಲೇಖಕರೊಡನೆ ಅವರು ಯಾವ ರೀತಿ ಪತ್ರ ವ್ಯವಹಾರ ಮಾಡುತ್ತಿದ್ದರು ಎಂಬುದನ್ನೇ ಕೆ.ಟಿ. ಶ್ರೀಧರ್ ಒಂದೆಡೆ ವಿವರಿಸಿದ್ದಾರೆ. ಬರಿಯ ಎರಡು ಲೇಖನ ಬರೆದಿದ್ದ ಡಾ. ಲಲಿತಾ ಭಟ್ಟ ಅವರಿಗೆ ಆಚಾರ್ಯರಿಂದ ೫-೬ ಪತ್ರಗಳು ಹೋಗಿದ್ದುವು. ಸ್ವತಃ ಶ್ರೀಧರರಿಗೆ ಅವರಿಂದ ೬೦ಕ್ಕೂ ಮೇಲ್ಪಟ್ಟು ಪತ್ರಗಳು! ಯಾರಾದರೂ ಲೇಖಕರು ಇಂಥದೊಂದು ಲೇಖ ಬರೆಯುತ್ತೇನೆ, ಕಳಿಸುತ್ತೇನೆ ಎಂದು ಪತ್ರ ಬರೆದರೆ ಮತ್ತು ಆ ಮುಂದೆ ಹಲವು ಸಮಯ ಸಂದು ಹೋದರೆ ಆಚಾರ್ಯರು ನೆನೆಪಿನ ಕಾಗದ ಬರೆಯುತ್ತಿದ್ದರು. ಮೇಲೆ ಹೇಳಿದ ಡಾ. ಲಲಿತಾ ಅವರ ಒಂದು ಲೇಖ ಪ್ರಕಟವಾದಾಗ ವೈದ್ಯಕೀಯ ವಿಜ್ಞಾನದಲ್ಲಿ ಅವರು ಬರೆಯಬಲ್ಲರೆಂಬ ವಿಚಾರ ಸುಳಿಯಿತು. ಆಗ ಪಾವೆಂ. ಅವರು ಆ ಡಾಕ್ಟರರಿಂದ ಬೇರೆ ವೈದ್ಯಕೀಯ ವಿಷಯ ತಿಳಿಯಲು ಆಸೆಪಟ್ಟದ್ದು ಹೀಗೆ:

ಡಾಕ್ಟರರು ರೋಗಿಯ ಬಾಯಿ ತೆರೆಯಲು ಹೇಳುತ್ತಾರೆ. ಕಣ್ಣ ರೆಪ್ಪೆ ಎತ್ತಿ ಒಳಗೆ ಹಣಕುತ್ತಾರೆ. ಎದೆಗೆ ಸ್ಟೆತೊಸ್ಕೋಪನ್ನು ಒತ್ತುತ್ತಾರೆ. ಇಂಥ ಬಾಹ್ಯ ಪರೀಕ್ಷೆಗಳಿಂದ ರೋಗದ ಸ್ವರೂಪವನ್ನು ಅದಾವ ಬಗೆಯಿಂದ ಕಂಡುಕೊಳ್ಳುತ್ತಾರೆ? ಇದೆಲ್ಲ ಏನು? ಈ ಪರೀಕ್ಷಾಕ್ರಮದಲ್ಲಿ ಹೊಸ ಬದಲಾವಣೆಗಳಿವೆಯೆ?

- ಇದು ಆಚಾರ್ಯರ ಲೇಖಕ - ಸಂಪರ್ಕದ ರೀತಿ. ಲೇಖ ಬರೆಯಲು ವಿಷಯವನ್ನು ಕೊಡುವುದು, ಬರೆದಾದ ಮೇಲೆ ಸಮಾನ ವಿಷಯದ ಮೇಲೆ ಇನ್ನೊಂದು ಲೇಖ ಬರೆಯಲು ಪ್ರೋತ್ಸಾಹಿಸುವುದು. ಪ್ರಸಂಗ ಬಂದರೆ ಎರಡು-ಮೂರು ಸಲ ತಿದ್ದುಗೆಗಾಗಿ ಕಳಿಸುವುದು!

ಕಸ್ತೂರಿಯಲ್ಲಿ ಬರುವ ಲೇಖಗಳ ಒಟ್ಟಿನ ಸ್ವರೂಪದ ಬಗ್ಗೆ ಒಬ್ಬರಿಗೆ ಬರೆದ ಪತ್ರದ ಮಾತುಗಳಿವು:

"ಶೈಲಿಯಲ್ಲಿ ಒಂದು ಮಿರುಗು. ಚಪಲತ್ವ ಇರಬೇಕು. ಇದು ಅಂಶತಃ ಮರ್ಮಜ್ಞತೆಯಿಂದ ಬರತಕ್ಕ ಗುಣ. ಆದರೆ ಇದು 'ಬಹು ವಿಷಯ ಜ್ಞಾನ'ದ ಅಗತ್ಯವನ್ನು ನಿವಾರಿಸಲಾರದು. ಈ ಬಹುವಿಷಯ ಜ್ಞಾನ ಎನ್ನುವುದು ಒಂದು ತರಹದ ರಾಸಾಯನಿಕ ಕ್ರಿಯೆಯನ್ನುಂಟು ಮಾಡುತ್ತದೆ. ಒಂದು ವಿಷಯದ ತಿಳುವಳಿಕೆ ಇನ್ನೊಂದು ವಿಷಯ ಬರೆಯುವಾಗ ಅದಕ್ಕೊಂದು ಮೆರುಗು ತರಬಲ್ಲದು. ಆ ಗಳಿಗೆಗೆ ನೆನೆಪು ಬರಬೇಕು ಮಾತ್ರ. ಇದು ನಾನು ಕಲಿತ ಪಾಠ" ಪಾವೆಂ. ಅವರ ಬರವಣಿಗೆಯಲ್ಲಿನ ಯಶಸ್ವಿತೆಯೇ ಇದರಲ್ಲಿದೆ.

'ಕಸ್ತೂರಿ'ಯ ಕಂಪು ಕರ್ನಾಟಕದಲ್ಲಿ ಮಾತ್ರವಲ್ಲ, ಹೊರಗಡೆಯೂ ಪಸರಿಸಿತ್ತು. ವಿದೇಶಗಳಲ್ಲಿಯೂ ಪತ್ರಿಕೆಗೆ ಚಂದಾದಾರರಿದ್ದರು. ಓರ್ವ ಮರಾಠೀ ಸಾಹಿತಿ "ಕಸ್ತೂರಿಯಂಥ ಮಾಸಪತ್ರಿಕೆ ಮರಾಠಿಯಲ್ಲಿ ಏಕೆ ಸಾಧ್ಯವಾಗುತ್ತಿಲ್ಲ?" ಎಂದು ಒಮ್ಮೆ ಹೇಳಿದ್ದರಂತೆ. ತೆಲುಗಿನಲ್ಲಿ ಒಂದು ಡೈಜೆಸ್ಟ್ ಪತ್ರಿಕೆ ತೆಗೆಯಬೇಕೆಂದು ಯೋಜನೆ ಹಾಕಿಕೊಂಡು ಓರ್ವ ತೆಲುಗರು ಆಚಾರ್ಯರನ್ನು ಕೇಳಿಕೊಂಡು ಹೋದರಂತೆ.

ಅದು ಬಿಡಿ, ಓರ್ವ ಕಂಪ್ಯೋಜಿಟರನು ಆಚಾರ್ಯರನ್ನು ಕಂಡು ಹೇಳಿದನಂತೆ: "ಆಚಾರ್ಯರೇ ನೀವು ಬರೆದದ್ದನ್ನು ಓದುವ ತನಕ ಕಾಶ್ಮೀರ ಸಮಸ್ಯೆಯ ತಳಬುಡವೇ ಅರ್ಥವಾಗಿರಲಿಲ್ಲ."

ಆದರೆ ಕಸ್ತೂರಿಯ ತಮ್ಮ ಕಾರ್ಯ ನಿರ್ವಹಣೆಯ ಬಗ್ಗೆ ಪಾವೆಂ. ಅವರ ನಿಲುವು ಬೇರೆ:

"ವೈಯಕ್ತಿಕವಾಗಿ ನನಗೆ ಕಸ್ತೂರಿಗಾಗಿ ಮಾಡಿದ ದುಡಿತ ಅಷ್ಟೊಂದು ತೃಪ್ತಿಕರ ಎನಿಸಿಲ್ಲ. ಅದಕ್ಕಾಗಿ ಮಾಡಬೇಕಾದ ಅಪಾರವಾದ ಪುಡಿ-ಓದಿನ ದೆಸೆಯಿಂದ ನನ್ನ ಸಾಹಿತ್ಯ ವ್ಯಾಸಂಗವೂ ವೃತ್ತಿ ಸಾಹಿತ್ಯ ರಚನೆಯೂ ಮೂಲೆಗುಂಪಾಗಿ ಹೋದವು."

ಇದಕ್ಕೆ ಪ್ರತಿಯಾಗಿ ಆ ಮುಂಚಿನ ಕರ್ಮವೀರದಲ್ಲಿಯ ಪತ್ರಿಕಾ ಕೆಲಸ ಅವರಿಗೆ ಹೆಚ್ಚು ಖುಶಿ ಕೊಟ್ಟಿದ್ದಿತಂತೆ. ಅವರ ಅಭಿಪ್ರಾಯ ಇದು: 'ಕರ್ಮವೀರದಲ್ಲಿ ನಾನು ಕಳೆದ ವರ್ಷಗಳು ನನ್ನ ಜೀವನದಲ್ಲಿ ತುಂಬಾ ಸಂತೋಷದ ದಿನಗಳು.' ಅದರ ಕಾರಣವನ್ನು ಸ್ವಲ್ಪದರಲ್ಲಿ ಹೀಗೆ ಊಹಿಸಬಹುದು. ಕರ್ಮವೀರದ ಲೇಖನಾದಿ ಕಾರ್ಯದಲ್ಲಿ ಸ್ವಂತಿಕೆಯನ್ನು ತೋರ್ಪಡಿಸುವ ಅವಕಾಶ ವಿಶೇಷವಾಗಿ ಇದ್ದಿತು. ಕಸ್ತೂರಿಯಲ್ಲಾದರೆ ಇನ್ನೊಬ್ಬರು ಬರೆದದ್ದನ್ನು ತಿದ್ದುವುದು; ಮತ್ತೂ ತಿದ್ದುವುದು!

ಪರಿಸ್ಥಿತಿ ಏನೇ ಇರಲಿ, ಕನ್ನಡ ವಾಚಕ ವೃಂದಕ್ಕೆ ಅನನ್ವಿತವಾದ ಪ್ರಯೋಜನ ಒದಗಿ ಬಂತು. ಕಸ್ತೂರಿಯು ನಾಡಿನಲ್ಲಿ ಒಂದು ಹೊಸ ಪ್ರಜ್ಞಾವಂತಿಕೆಯ ಪರಂಪರೆಯನ್ನು ನಿರ್ಮಿಸಿತು.

ಕಸ್ತೂರಿಯು ಸದ್ದಿಲ್ಲದೇ ಮಾಡಿದ ಇನ್ನೊಂದು ಸಾಧನೆಯೆಂದರೆ ಕನ್ನಡ ಗದ್ಯಕ್ಕೆ ತಂದು ಕೊಟ್ಟ ಸುಭಗತೆ. ಗದ್ಯವನ್ನು ತಿದ್ದಿ ತೀಡಿ ರಾಜಮಾರ್ಗದಲ್ಲಿ ಕೊಂಡೊಯ್ಯುವ ಕೆಲಸ ಮಾಡಿದವರಲ್ಲಿ ಪಾವೆಂ. ಒಬ್ಬರು. ಅದರಿಂದ ಉತ್ತರ ಕರ್ನಾಟಕದ ಗದ್ಯಶೈಲಿಯನ್ನು ಸಾರ್ವತ್ರಿಕವಾದ ಶಿಷ್ಟ ಕನ್ನಡಕ್ಕೆ ತಿರುಗಿಸಿದಂತಾಯಿತು.



## ೫. ಕತೆ - ಕವಿತೆ

ಪಾವೆಂ. ತಮ್ಮ ಸಾಹಿತ್ಯಕಾರ್ಯವನ್ನು ಕತೆ ಮತ್ತು ಕವಿತೆಗಳಿಂದ ಆರಂಭಿಸಿದರಷ್ಟೆ. ಅವರ ಮೊದಲ ಕವನ `ಉದ್ಧಾರ' ಎಂಬುದು ೧೯೩೩ರ ಜಯಕರ್ನಾಟಕದಲ್ಲಿಯೂ, ಮೊದಲ ಕತೆ `ಮಧುವನ' ಎಂಬ ಸಣ್ಣ ಕತೆಗಳ ಸಂಗ್ರಹದಲ್ಲಿಯೂ ಬಂದಿದೆ. ಉಡುಪಿಯಲ್ಲಿದ್ದಾಗ ಬರೆದಿದ್ದ ಅವರ ಕತೆಗಳೆಲ್ಲವೂ `ಹಿಂದೂ ಮುಸ್ಲಿಂ....' ಸಂಗ್ರಹದಲ್ಲಿ ಈಚೆಗೆ ಬಂದಿವೆ.

ಇವು ಹಳಗಾಲದವು (ಎಂದರೆ ೧೯೩೦ನೆಯ ದಶಕದ ಕತೆಗಳು) ಎಂದು ಅನಿಸಬಹುದು. ಆದರೆ ಹೆಚ್ಚಿನ ಕತೆಗಳಲ್ಲಿ ನಾವೀನ್ಯವಿದೆ. `ಹಿಂದೂ-ಮುಸ್ಲಿಂ' ಎಂಬ ಕತೆಯಲ್ಲಿ ಇಂದಿಗೂ ನಡೆಯುವ ಜಾತಿಗಲಭೆಯ ಒಂದು ಪರಿ ಇದೆ. ಏಳು ಸಾವಿರ ರೂ.ಗಳನ್ನು ಹಂಚಿಕೊಳ್ಳುವುದು, ತನಗೆ ಬೇಕಾದ ಹುಡುಗಿಯೊಬ್ಬಳನ್ನು ಓಡಿಸಿಕೊಂಡು ಹೋಗುವುದು- ಎಂಬಂತಹ ಆಲೋಚನೆಗಳು ಗಲಭೆ ಎಬ್ಬಿಸುವವರಲ್ಲಿರುತ್ತವೆ. ಈ ಸಂಚಿನಲ್ಲಿ ಎರಡೂ ಜಾತಿಯ ಕೆಲವರು ಒಂದಾಗಿರುತ್ತಾರೆ. ಆದರೆ ಗಲಭೆಗೇನೆ ಸಂಬಂಧಿಸಿದ ಒಂದು ಸಣ್ಣ ಘಟನೆಯಿಂದ ಅದು ನಡೆಯುವುದೇ ಇಲ್ಲ.

ಹೊಸತನದ ದೃಷ್ಟಿಯಿಂದ `ಅಪರ' ಕತೆಯನ್ನು ಪರಿಶೀಲಿಸಬಹುದು. ಆತ್ಮ ಎನ್ನುವುದು ಅಮರ ಎಂದು ತಿಳಿದೇ ಇದ್ದೇವೆ. ಅಂದರೆ ಹಿಂದಿನ ಜನ್ಮದ್ದು ಇಂದಿಗೆ ಸಾಗಿಬರುತ್ತದಾದರೂ ಅದರ ಯಾವುದೇ ಕುರುಹು ಅಥವಾ ನೆನಪು ತಿಳಿಯಬರುವುದಿಲ್ಲ. ಪಾಶ್ಚಾತ್ಯ ವಿಜ್ಞಾನದಲ್ಲಿ ಇದನ್ನು Parapsychology ಎನ್ನುತ್ತಾರೆ. ಕನ್ನಡದಲ್ಲಿ ಅಪರೂಪವಾಗಿ ಚಿತ್ರಿತವಾದದ್ದುಂಟು. (ಉದಾ. ಭೈರಪ್ಪ ಅವರ `ನಾಯಿನೆರಳು') ಪಾವೆಂ ಅವರ ಅಪರಜೀವನ ಚಿತ್ರಣವು ತೀರ ಹಿಂದೆ ಎಂದರೆ ೧೯೪೦ರಲ್ಲಿ ಪ್ರಕಟವಾಗಿದ್ದು ಈ ದಿಕ್ಕಿನಲ್ಲಿ ಪಾವೆಂ. ಅವರೇ ಮೊದಲಿಗರು. ಇದಕ್ಕೆ ಅವರು ಓದಿದ ಯಾವುದೋ ಒಂದು ಕತೆಯು ಪ್ರೇರಣೆಯೊದಗಿಸಿತ್ತು. ಈ ಕತೆಯಲ್ಲಿ ಸೇಡು, ನಿಗೂಢತೆ, ಆತ್ಮಹತ್ಯೆ ಇವೆಲ್ಲ ಪರಕಾಯ ಪ್ರವೇಶ ರೀತಿಯಲ್ಲಿ ಕೆಲಸ ಮಾಡುತ್ತವೆ. ಅತೀಂದ್ರಿಯ ಪ್ರಜ್ಞಾ ಸಾಹಿತ್ಯವು ಈಗೂ ಕಡಿಮೆ ಇರುವಾಗ ಈ ಕತೆಯ ನಾವೀನ್ಯ ಇಂದಿಗೂ ಗಣನೀಯ.

ಇನ್ನುಳಿದ ಕತೆಗಳು ಹೊಸ ರೀತಿಯಲ್ಲಿ ಮನರಂಜಿಸುವ ಕತೆಗಳಾಗಿವೆ. 'ವಿನೋದದ ಪರಮಾವಧಿ'ಯಲ್ಲಿ ಮಿತ್ರನೊಬ್ಬ ಸತ್ತನೆಂದು ಗೇಲಿಮಾಡಿದಾಗ ಅವನು ಸತ್ತೇ ಹೋಗುತ್ತಾನೆ ಇತರ ಮಿತ್ರರ ಬೇಜವಾಬ್ದಾರಿತನದಿಂದ. ಒಬ್ಬ ಸ್ವಾಮಿಗಳ ಕಥೆಯಲ್ಲಿ ಸನ್ಯಾಸಿಯಾದರೂ ಮಾನವ ಸ್ವಭಾವ ಬದಲಾಗುವುದಿಲ್ಲ ಎಂಬ ಚಿತ್ರಣವಿದೆ. 'ಒಂದು ಅ-ನೀತಿ' ಮತಾಂತರದ ಅವಾಂತರದ ಕಥೆಯಾಗಿದೆ. 'ವಾಕಿಂಗ್ ಸ್ಟಿಕ್'ನಲ್ಲಿ ಆಡಳಿತದ ಕಟು ಟೀಕೆ ಪ್ರಧಾನವಾಗಿದೆ. 'ಕನಸು' ಮುಗ್ಧೆಯೊಬ್ಬಳ ಮಾನಸಿಕ ತುಮುಲವನ್ನು ಚಿತ್ರಿಸುತ್ತದೆ. ಹೀಗೆ ಇಲ್ಲಿಯ ಕತೆಗಳಲ್ಲಿ ವೈವಿಧ್ಯವಿದೆ; ಹೊಸತನವಿದೆ.

## ಕವಿತೆ

ಪಾವೆಂ. ಆಚಾರ್ಯರ ಹತ್ತಾರು ವಿಧದ ಬರವಣಿಗೆಗಳಲ್ಲಿ ಕವಿತೆಯೇ ಅವರಿಗೆ ಮೆಚ್ಚಿನದು. ಮಧ್ಯವಯದಲ್ಲಿ ಒದಗಿ ಬಂದ ಶಬ್ದಾಸಕ್ತಿಯು ಅನಂತರದ ಆಸ್ಥೆಯ ವಿಷಯವಾಗಿತ್ತು. ಆದರೆ ಅವರೇ ಒಂದೆಡೆ ಹೇಳಿದಂತೆ 'ಜೀವನದ ಬಿರುಗಾಳಿ ನನ್ನನ್ನು ಮೊದಲಿನಿಂದಲೂ ಕಾವ್ಯದ ವ್ಯವಸಾಯಕ್ಕೆ ಪ್ರತಿಕೂಲವಾದ ಕ್ಷೇತ್ರಗಳಲ್ಲಿಯೆ ಸುತ್ತಾಡಿಸುತ್ತ ಬಂದಿತು. ಅಂತೆಯೇ ಅವರ ಎರಡೇ ಸಂಕಲನಗಳು ಹೊರಬಂದಿದ್ದು 'ಹೌಸಿಂಗ್ ಕಾಲನಿ' ಎಂಬ ಈಚಿನ ಸಂಗ್ರಹದಲ್ಲಿ ಎಲ್ಲ ಕವಿತೆಗಳನ್ನು ಸಂಕಲಿಸಲಾಗಿದೆ. ಒಟ್ಟು ಕೇವಲ ೭೬ ಪದ್ಯಗಳು. ಅವಷ್ಟೇ ಅವರನ್ನು ಪ್ರಥಮ ದರ್ಜೆಯ ಕವಿಯನ್ನಾಗಿಸಿವೆ.

ಹಾಮಾನಾ ಅವರು ತಮ್ಮೊಂದು ಲೇಖದಲ್ಲಿ, ಅವರ 'ಉದ್ದೇಶ' ಕವಿತೆ ಕನ್ನಡದ ಯಾವ ಸಂಕಲನದಲ್ಲಾದರೂ ಸೇರುವ ತುಂಬ ಯೋಗ್ಯತೆಯ ಕೃತಿ ಎಂದಿದ್ದಾರೆ. ಕೇಂದ್ರ ಸಾಹಿತ್ಯ ಅಕಾಡೆಮಿಯ ಒಂದು ಪ್ರಾತಿನಿಧಿಕ ಸಂಗ್ರಹದಲ್ಲಿ ಅವರದೊಂದು ಕವಿತೆಗೆ ಕರೆಯಿತ್ತು ಸೇರಿಸಿದ್ದಾಗಿದೆ. ಹಾಗೆ ಸೇರಿಸಿಕೊಂಡದ್ದು 'ಗೋಪಿ' ಎನ್ನುವ ಕವಿತೆ. ಅದು ಬೇರೆಡೆಗೂ ಉಕ್ತವಾಗಿದ್ದು ಸ್ವತಃ ಪಾವೆಂ. ಅವರೇ ತುಳು ಮತ್ತು ಹಿಂದೀ ಭಾಷೆಗಳಲ್ಲಿ ಅನುವಾದಿಸಿದ್ದಾರೆ:

ಪ್ರತಿಯೊಬ್ಬ ಗೋಪಿಯೂ
ಏಕಾಂತದಲ್ಲಿ
ಸೀರೆಯನು ಬಿಚ್ಚಿಟ್ಟು
ಇಳಿಯುವಳು ಕಾಳಿಂದಿಯಲ್ಲಿ
ಕ್ಷಣಕ್ಕೊಮ್ಮೆ ಹಾರುವುದು
ದಡದ ಕದಂಬದತ್ತ

ದೃಷ್ಟಿ ಪಕ್ಷಿ,
ಯಾವ ಗೋಪಾಲ ಯಾವಾಗ ಬರುವನೊ ಎಂದು
ಬೆಚ್ಚಿ ಬೆಚ್ಚಿ
ಆದರೂ
ತೋರ ಮೊಲೆಗಳ ಮೇಲೆ
ನೀರ ಮಣಿಗಳ ಮಾಲೆ
ಮಿಸುಗಿಸುತ ಮೇಲೆ ಬಂದು
ಸೀರೆ ಕುಪ್ಪಸವ ಇದ್ದಲ್ಲೆ ಕಂಡು
ಸೂಸುವಳು ತನಗು ಕೇಳಿಸದಂತೆ
ನಸು ನಿರಾಶೆಯ ನಿಟ್ಟುಸಿರನೊಂದು

ಹೀಗೆಯೇ ಒಂದೊಂದು ಕವನವನ್ನೆತ್ತಿಕೊಂಡು ವಿಮರ್ಶಕರು 'ಇದೊಂದು ಇದ್ದರೆ ಸಾಕು ಆಚಾರ್ಯರ ಕವನದೀಪ್ತಿಗೆ' ಎಂದು ಹೇಳಿದವರಿದ್ದಾರೆ. ಶಂಕರ ಮೊಖಾಶೀ-ಪುಣೇಕರರು 'ಹೌಸಿಂಗ್ ಕಾಲನಿ' ಪದ್ಯದ ಬಗ್ಗೆ ಬರೆಯುತ್ತ 'ಇಂಥ ಒಂದೇ ಕವನವಾದರೂ ಸರಿ, ಕಾವ್ಯದಲ್ಲಿ ನವ್ಯತೆ ಬಂದದ್ದು ಸಾರ್ಥಕ ಎನಿಸುತ್ತದೆ' ಎಂದಿದ್ದಾರೆ. ಕು.ಶಿ. ಹರಿದಾಸಭಟ್ಟರಿಗೆ 'ಆಯಿಜಿ ನರಮಾನಿ' ಎಂಬ ತುಳು ಪದ್ಯ ತಲೆಯ ಮೇಲಿಟ್ಟುಕೊಂಡು ಕುಣಿದಾಡುವಷ್ಟು ಖುಶಿ ಕೊಟ್ಟಿದೆ.

ನವೋದಯ ಹಾಗೂ ನವ್ಯ ಈ ಎರಡೂ ಯುಗಗಳಲ್ಲಿ ಬೆಳೆದ ಕಾರಣದಿಂದ ಜೊತೆಗೆ ಅವರ ವಿಡಂಬನ ದೃಷ್ಟಿಯಿಂದಾಗಿ, ಅವರ ಸೀಮಿತ ಸಂಖ್ಯೆಯ ರಚನೆಗಳು ಹೊಸಗನ್ನಡ ಕವಿತೆಯ ಎಲ್ಲ ಪರಿಗಳನ್ನು ಒಳಗೊಂಡಿವೆ. ವಿಡಂಬನದ ರೀತಿಗೆ 'ಸುಸಿಗೆ' ಎಂಬ ಭಾವಗೀತ ಉತ್ತಮ ಉದಾಹರಣೆಯಾಗಿದೆ. ಅವರ ಕೆಲವು ಸಾಲುಗಳಿವು:

ಬಡ ಮುನಸಿಪಾಲಿಗೆ ಒಡಹುಟ್ಟಿದವ ನೀನು
ನಾಗರಿಕ ನರನಾರಿವದನ ಕಮಲದ ಜೇನು
ನಿದ್ದೆವೆಣ್ಣಿನ ಕೈಯ ಬೀಣೆ! ನಿನ್ನಯ ದನಿಯ
ಮಾಧುರಿಗೆ ಮಾನವನು ಮೈಮರೆತು ಮಸದಣಿಯ.
ಓ ಸುಸಿಯೆ, ಪ್ರೇಮಗಾನದ ಸಖಿಯೆ, ಸಂತಸಿಯೆ!
ನಿನ್ನನರಿಯದೆ ಜರೆವ ಮಾನವನೆ ಕಡು ಕಿವುಡ
ಇವಕೊ! ನಿನಗೆನ್ನ ನೆತ್ತರ ಕಾಣ್ಕೆ, ಹಸಿಬಿಸಿಯೆ!
ಬೇಡುವವರ ರೇವಿಯೋ ನೀನು, ಬಡವರ ಬಂಧು!

ಪಾವೆಂ. ಉತ್ತರಾರ್ಧದ ಕವಿತೆಗಳಲ್ಲಿ ತಾವು ನವ್ಯರು ಎನ್ನುವ ಭಾವನೆ ಹುಟ್ಟಿಸಬಹುದು. ಆದರೆ ನವ್ಯತೆಗೆ ಸದಾ ಮುಳುಗಿದವರಲ್ಲ. ಒಂದೆಡೆ:

ಕವಿಯೊಬ್ಬ ಕವಿತೆಯನ್ನು
ಗಾಜಿನಲಿ ಬರೆದ
ಕೈತಪ್ಪಿ ಕೆಳಗೆ ಒಗೆದ
ಕೈಗೆ ಬಂದಂತೆ ಚೂರುಗಳ ಜೋಡಿಸಿದ
ನವ್ಯ ಕಾವ್ಯ ಇದೆಂದು ಕರೆದ

- ಎಂಬುದಾಗಿ ಟೀಕಿಸಿಯೂ ಇದ್ದಾರೆ. ನವೋದಯದಲ್ಲಿ ಇಲ್ಲದ ವಿಡಂಬನೆ ತಮ್ಮ ಕವನಗಳಲ್ಲಿ ಕಂಡು ಬಂದರೆ ಅದು ನವ್ಯಕಾವ್ಯದ ಪ್ರಭಾವದಿಂದಲ್ಲ ಎಂಬುದನ್ನು ಅವರು ಸ್ಪಷ್ಟಪಡಿಸಿದ್ದಾರೆ.

## ಪೆಂಗೋಪದೇಶ

ಆಚಾರ್ಯರು ಡಿವಿಜಿಯವರ 'ಮಂಕುತಿಮ್ಮನ ಕಗ್ಗ'ದ ಮಾದರಿಯಲ್ಲಿ 'ಪೆಂಗೋಪದೇಶ'ಗಳನ್ನೂ ಕೊಡಮಾಡಿದ್ದಾರೆ. ಇದುವರೆಗೆ ಅಪ್ರಕಟಿತ ಸ್ವರೂಪದಲ್ಲಿದ್ದವುಗಳನ್ನು `ಹೌಸಿಂಗ್ ಕಾಲನಿ' ಸಂಗ್ರಹದ ಕೊನೆಯಲ್ಲಿ ಕೊಟ್ಟಿದೆ. ಇದೊಂದು ಮಾದರಿ:

ಮತಿವಂತರೆಲ್ಲರೂ ಕೃತಿವಂತರಾಗಿರಲು
ಏನು ಭಾಗ್ಯಕ್ಕೆಣೆಯೊ ಮನುಕುಲಕ್ಕೆ!
ಕೃತಿವಂತರೆಲ್ಲರೂ ಮತಿವಂತರಲ್ಲೆಂದೆ
ಮನುಜ ಕುಲ ಬದುಕಿರುವುದೆಂದೆನಲೊ ಪೆಂಗೆ

ಹೀಗೆ ಇವುಗಳಲ್ಲಿ ಬದುಕಿನ ಬಗೆಯನ್ನು ವಿಡಂಬನಾತ್ಮಕವಾಗಿ ಕಾಣುತ್ತ ನಿತ್ಯ ನೀತಿಯ ಮಾತುಗಳನ್ನು ಹೇಳಿದ್ದಾರೆ. ಇದಕ್ಕೆ ಇನ್ನೊಂದು ಉದಾಹರಣೆ ಕೊಡಬೇಕೆನಿಸುವುದು;

ಬದುಕು ಖಟರಾ ಬಸ್ಸು, ವಿಧಿಯದರ ಡ್ರೈವರನು
ಕುಡಿದು ಹೊಡೆಯುತ್ತಾನೆ ಎರಡು ಕಾಣುತ್ತ
ಗಟರವೊ ಮರವೋ ಸಂಕವೊ ಟ್ರಕ್ಕೊ ಗೋಡೆಯೋ
ಮಡಿವವನಿಗಾವುದೇನೊ ಎಲವೊ ಪೆಂಗೆ.

## ಸುಭಾಷಿತ ಚಮತ್ಕಾರ

ಪಾವೆಂ. ಆಚಾರ್ಯರು ಸುಭಾಷಿತಗಳನ್ನು ಜಟ್ಟಿಸಿಂದ ಶೂನ್ಯವಾದ ಬೌದ್ಧಿಕತೆಗೆ ಸಾಣೆ ಹಿಡಿಯಲು ಅನುವಾದಿಸತೊಡಗಿದರು. ಸುಭಾಷಿತಗಳೆಂದರೆ ನಾಲ್ಕೆಂಟು ಸಾಲಿನ ಚುಟುಕಗಳೇ.

ಇಂಥ ಚುಟುಕಗಳನ್ನು ನೇರವಾಗಿ ಕನ್ನಡದಲ್ಲಿ ಬರೆಯುವ ಕ್ರಮ ಆರಂಭವಾಗಿತ್ತು. ಆಚಾರ್ಯರೂ ಅಂಥವನ್ನು ಬರೆದೇ ಇದ್ದವರು, ಆದರೆ ಸಂಸ್ಕೃತದಲ್ಲಿದ್ದವುಗಳನ್ನು ಅಷ್ಟೇ ಚೇತೋಹಾರಿಯಾಗಿ, ಚಮತ್ಕಾರಿಕವಾಗಿ ಹಾಗೂ ಅದೇ ಪರಿಮಿತಿಯಲ್ಲಿ ಕನ್ನಡಕ್ಕೆ ತರುವುದು ಅತ್ಯಂತ ಕಷ್ಟದ ಕೆಲಸ. ಸ್ವತಂತ್ರವಾದ ಭಾವಗೀತೆಗಳನ್ನು ರಚಿಸುವುದು ಸುಲಭ. ದೈಹಿಕ ಸ್ವಾಸ್ಥ್ಯವು ಒದಗಿಸಿದ್ದ ಸೀಮಿತ ಪರಿಮಿತಿಯಲ್ಲಿ ಇವನ್ನು ರಚಿಸಿದ್ದಾರೆ ಎಂಬುದು ಗಮನದಲ್ಲಿರಲಿ.

ಪಾವೆಂ. ಇಂಥ ಅಂಸಂಖ್ಯ ಮಿಕ್ಕಿದ ಸುಭಾಷಿತಗಳನ್ನು, ಅದರಲ್ಲಿಯೂ ಮನಸ್ಸಿಗೆ ಕಚಗುಳಿಯನ್ನಿಡುವವುಗಳನ್ನು ಎತ್ತಿಕೊಂಡು ಅನುವಾದಿಸಿದ್ದಾರೆ. ಮೂಲವನ್ನೂ ಕೊಡಲಾಗಿದೆ. ಹಾಗೆ ಕೊಡದಿದ್ದರೆ ಇವು ಸ್ವತಂತ್ರವಾದ ಕನ್ನಡ ಚುಟುಕಗಳೆಂದೇ ಅನಿಸುತ್ತಿತ್ತು.

**ಒಳ್ಳೆವರ ಮನವೊಂದು ಬೆಣ್ಣೆಮುದ್ದು ಎಂದು**
**ಬಲ್ಲವರು ನುಡಿವ ನುಡಿ ಸಲ್ಲ, ಬೆಣ್ಣೆ ತಾ**
**ಪರರ ತಾಪಕ್ಕೆ ಕರಗುವುದೆ ?**

ಇದು ಸುಭಾಷಿತದ ನೇರ ಅನುವಾದವೇನಲ್ಲ; ಸರ್ವಜ್ಞನ ರೀತಿಯ ತ್ರಿಪದಿಯಾಗಿದೆಯಲ್ಲವೆ. ಎಷ್ಟೋ ಸಲ ಮೂಲಕ್ಕಿಂತಲೂ ಕಡಿಮೆ ಶಬ್ದಗಳಲ್ಲಿ ಆಚಾರ್ಯರು ಕನ್ನಡದಲ್ಲಿ ತಂದದ್ದುಂಟು.

**ಆಶಾಯಾ ಯೇ ದಾಸಾಸ್ತೇ ದಾಸಾ ಸರ್ವಲೋಕಸ್ಯ**
**ಆಶಾ ಯೇಷಾಂ ದಾಸೀ ತೇಷಾಂ ದಾಸಾಯತೇ ಲೋಕಃ**

ಈ ಸಂಸ್ಕೃತ ಸುಭಾಷಿತವು ಕನ್ನಡದಲ್ಲಿ ಬಂದ ಬಗೆಯಿದು:

**ಆಸೆಗೊಳಗಾದವನು ಲೋಕಕ್ಕೆ ಆಳು;**
**ಆಸೆಯನ್ನಾಳುವಗೆ ಲೋಕವೇ ಆಳು.**

ಎಷ್ಟೋ ಬಾರಿ ಅವು ಚಾಟೂಕ್ತಿಗಳಾಗಿಯೂ ಪರಿಣಮಿಸಿವೆ.

**ತನ್ನ ಗುಣಗಳ ತಾನೆ ಡಂಗುರ ಹೊಯ್ಯಲೇನು ಸುಖ?**
**ತನ್ನ ಕುಚಗಳ ತಾನೆ ಮಿಡಿವುದು ಹೆಣ್ಣಿಗೇನು ಸುಖ?**

ಆತ್ಮಸ್ತುತಿ ಮಾಡಿಕೊಳ್ಳುವವರನ್ನು ಇಲ್ಲಿ ಚೆನ್ನಾಗಿ ತಾಡಿಸಿದಂತಿದೆಯಲ್ಲವೆ?

ಇಲ್ಲಿಯ ಒಂದೊಂದು ಕನ್ನಡ ಸುಭಾಷಿತವೂ ತನ್ನ ಸುಭಗತೆಯಿಂದ ಹಾಗೂ ಮಾರ್ಮಿಕತೆಯಿಂದ ಮತ್ತೆ ಮತ್ತೆ ಓದಬೇಕೆನಿಸುತ್ತದೆ.



## ೬. ವ್ಯಕ್ತಿ ಚಿತ್ರಗಳು

ಪಾವೆಂ. ನೂರಕ್ಕೂ ಮೇಲ್ಪಟ್ಟು ಸಾರ್ಥಕ ಜೀವನ ನಡೆಸಿದ ವ್ಯಕ್ತಿಗಳ ಚಿತ್ರಣವನ್ನು ಕೊಡಮಾಡಿದ್ದಾರೆ. ಅದರಲ್ಲಿ ನಮಗೆ ಸಾಮಾನ್ಯವಾಗಿ ಗೊತ್ತಿರದ ಆದರೆ ಹೆಸರುವಾಸಿಗಳಾಗಿದ್ದ ವಿದೇಶೀಯರಿದ್ದಾರೆ. ಹಾಗೇನೇ ಖ್ಯಾತಿವೆತ್ತ ಭಾರತೀಯರಿದ್ದಾರೆ. ಇತ್ತ ಹೊಸಗನ್ನಡದ ಸಾಹಿತ್ಯಿಕ ಹಿರಿಯರನ್ನು ಕಣ್ಣಾರೆ ಕಂಡವರಾಗಿ ಅವರನ್ನೂ ಪರಿಚಯ ಮಾಡಿಕೊಟ್ಟಿದ್ದಾರೆ. ಅಲ್ಲದೆ ಇವಕ್ಕಿಂತ ಸೀಮಿತ ಕ್ಷೇತ್ರವಾದ ಉಡುಪಿಯ ಪರಿಸರದಲ್ಲಿದ್ದ ಕೆಲವರನ್ನೂ ಗಮನಿಸಿದ್ದಾರೆ. ಹೀಗೆ ಜೀವನದ ಅನೇಕಾನೇಕ ರಂಗಗಳಲ್ಲಿ ಬೆಳಗಿದವರನ್ನು ಆಯ್ದುಕೊಂಡಿದ್ದಾರೆ.

ಆಚಾರ್ಯರ ವ್ಯಕ್ತಿಚಿತ್ರಣದ ವೈಶಿಷ್ಟ್ಯವೆಂದರೆ, ಅವರು ಆ ವ್ಯಕ್ತಿಯ ಹುಟ್ಟು, ಬೆಳವಣಿಗೆ, ಲೌಕಿಕ ವಿಚಾರ ಇವುಗಳಿಗೆ ಒತ್ತುಕೊಡದೇ, ಅವರ ಜೀವನ ಸಾಧನೆಯ ಮರ್ಮವೇನು; ಹಿನ್ನೆಲೆ ಯಾವುದು ಎಂಬುದನ್ನು ವಿವರಿಸಿದ್ದಾರೆ. ಇದರಿಂದಾಗಿ ಆ ವ್ಯಕ್ತಿಯ ಬಗ್ಗೆ ಕೆಲವೇ ಪುಟಗಳ ಚಿತ್ರಣವಿದ್ದರೂ ಅವರ ವ್ಯಕ್ತಿತ್ವ ಸ್ಫುಟವಾಗಿ ನಿಲ್ಲುತ್ತದೆ.

ಈ ಚಿತ್ರಣದಲ್ಲಿ ರಾಜಕೀಯ ಧುರಂಧರರ ಜೊತೆಗೆ ಡಾಕ್ಟರ್ ಜನರಿದ್ದಾರೆ. ಶಿಕ್ಷಣತಜ್ಞರ ಸೆರೆಯಲ್ಲಿಯೇ ಚಿತ್ರ, ಸಂಗೀತಾದಿ ಕಲಾವಿದರಿದ್ದಾರೆ. ಪಾವೆಂ. ಅವರಿಗೆ ವಿಜ್ಞಾನಿಗಳಷ್ಟೇ ತತ್ವವೇತ್ತರೂ ಬೇಕು. ಹೀಗೆ ಅವರು ಸಾಹಿತಿಗಳು, ಉದ್ಯಮಿಗಳು, ದಲಿತೋದ್ಧಾರಕರು -ಎಲ್ಲರನ್ನೂ ಸಮಾನ ಪಂತದಲ್ಲಿ ಇರಿಸಿದ್ದಾರೆ. ಅಂತೂ ಯಾವುದೇ ರಂಗವಿರಲಿ ವ್ಯಕ್ತಿಯೊಬ್ಬ ಏನಿಷ್ಟು ಸಾಧಿಸಿದವನಾದರೆ ಅವನ ಸಾಧನೆಯನ್ನು ಅರಸಿಕೊಂಡು ಹೋಗಿ ಸೆರೆಹಿಡಿದಿದ್ದಾರೆ. ಆ ವ್ಯಕ್ತಿ ಸಾಧಿಸಿದ್ದೇನು, ಅದರ ಗುಟ್ಟೇನು ಎಂಬುದನ್ನು ಗ್ರಹಿಸಿ, ಅವರ ಜೀವನದ ಯಶಸ್ಸಿನ ಮರ್ಮವನ್ನು ವಿವರಿಸಿದ್ದಾರೆ.

ಆ ವ್ಯಕ್ತಿ ಇಂಥದೇ ಪ್ರದೇಶದವನಿರಬೇಕೆಂಬ ನಿಯಮವನ್ನು ಇಟ್ಟುಕೊಂಡಿಲ್ಲ. ರಶಿಯದ ಕ್ರಾಂತಿವೀರರ ಜೊತೆಗೆ ಬೆಲ್ಜಿಯಮ್‌ನಂತಹ ಚಿಕ್ಕದೇಶದವರೂ ಇಲ್ಲಿ ಮೂಡಿದ್ದಾರೆ.

ಪೂರ್ವದಿಕ್ಕಿನ ಜಪಾನ್, ಕಪ್ಪು ಜನಾಂಗದ ಆಫ್ರಿಕಾ-ಹೀಗೆ ಜಗದಗಲಪಿದ್ದ ಜನರನ್ನು ನಾವು ಇಲ್ಲಿ ಪರಿಚಯಿಸಿಕೊಳ್ಳುತ್ತೇವೆ. ಕಾಲಮಾನದಿಂದ, ಪ್ಲೇಟೊ, ದವಿಂಚಿ, ಕಶ್ಯಪ, ಮಾತಂಗ ಈ ಕೆಲವರನ್ನು ಬಿಟ್ಟರೆ ಎಲ್ಲರೂ ೧೯-೨೦ನೆಯ ಶತಮಾನದವರೇ.

ಭಾರತೀಯರು ದೊಡ್ಡ ಸಂಖ್ಯೆಯಲ್ಲಿ ಚಿತ್ರಿತರಾದದ್ದು ಸ್ವಾಭಾವಿಕವಾದದ್ದು. ಅವರಲ್ಲಿ ಕನ್ನಡಿಗರು-ಸಾಹಿತಿಗಳಲ್ಲದವರೂ, ಅಲ್ಲಲ್ಲಿ ಮಿನುಗುತ್ತಾರೆ. ಉದಾ.ಗೆ ಅಂಬೇಡ್ಕರರಂತೂ ಸರಿಯೇ. ಪಕ್ಕದಲ್ಲಿಯೇ ಆದರ್ಶ ರೈತ ಚೆನ್ನಮಲ್ಲಪ್ಪ ಅಸುಂಡಿಯವರು ನಿಂತುಕೊಂಡಿದ್ದಾರೆ. ಇಂತು ಪಾವೆಂ. ನಿರ್ಮಿತ ವ್ಯಕ್ತಿ ಚಿತ್ರಣದ ಕ್ಯಾನ್‌ವಾಸ್ ಹಲವಾರು ದೃಷ್ಟಿಯಿಂದ ವಿಸ್ತಾರವಾದದ್ದು.

ಮೆಚ್ಚಬೇಕಾದ ಅಂಶವೆಂದರೆ ಈ ಪರಿಯ ವೈವಿಧ್ಯವಿರುವ ವ್ಯಕ್ತಿಗಳ ಮಾಹಿತಿಗಾಗಿ ಪಾವೆಂ. ಒದ್ದಾಡುತ್ತಿದ್ದುದು ಅಷ್ಟಿಷ್ಟಲ್ಲ. ಎಲ್ಲೋ ಒಂದು ಕಡೆಗೆ ಸಿಕ್ಕಷ್ಟನ್ನು ಬಾಚಿಕೊಂಡು ಅದನ್ನೊಂದು ಲೇಖವನ್ನಾಗಿ ಮಾಡುವ ಅವಸರದ ಪತ್ರಿಕಾವೃತ್ತಿ ಅವರದಾಗಿರಲಿಲ್ಲ. ಸಂಬಂಧಿತ ವ್ಯಕ್ತಿಯ ಬಗ್ಗೆ ಹಲವಾರು ಆಕರಗಳನ್ನು ತಿರುವಿ ಹಾಕಿ ವಿಷಯ ಪೂರ್ತತೆಗಾಗಿ ಇನ್ನಷ್ಟು ಪ್ರಯತ್ನಿಸಿ, ಆ ವ್ಯಕ್ತಿಯ ಸಾಧನೆಯ ಇಡುನೋಟ ದೊರೆತಾಗಲೇ ಅವರ ಪೆನ್ನಿನಿಂದ ಮಸಿ ಇಳಿಯಬೇಕು. ಹೀಗೆ ಎಲ್ಲೆಲ್ಲಿಯೊ ಚದರಿದ ಅಪರಿಚಿತ ಮೂಲಗಳಿಂದ ಘಟನಾವಳಿಗಳನ್ನು ಹೆಣೆಯುವ ಮತ್ತು ಅದರ ಮತಿತಾರ್ಥವನ್ನು ರೂಪಿಸುವ ಕೌಶಲ್ಯದಲ್ಲಿ ಪಾವೆಂ. ಅವರನ್ನು ಸರಿಗಟ್ಟುವವರು ವಿರಳ.

ಪಾವೆಂ. ಅವರ ವ್ಯಕ್ತಿಚಿತ್ರಗಳನ್ನು ಓದಿದಾಗ ಯಾವುದೊ ಮೇಲಂತಸ್ತಿನ ಲೋಕದಲ್ಲಿ ವಿಹರಿಸಿದ ಭಾವನೆಯುಂಟಾಗುತ್ತದೆ. ತರುಣರಿಗಂತೂ ಬೋಧಪ್ರದವೆನಿಸುವುದರಲ್ಲಿ ಸಂದೇಹವಿಲ್ಲ.

ಇನ್ನು ಕನ್ನಡದ ಹಿರಿಯ ಸಾಹಿತಿಗಳನ್ನು ಅವರು ಯಾವ ರೀತಿ ಪರಿಚಯಿಸಿದ್ದಾರೆಂಬುದನ್ನು ನೋಡೋಣ. ಇಲ್ಲಿರುವ ೧೬ ಜನ ಸಾಹಿತ್ಯಿಕದಲ್ಲಿ ಕೆಲವರ ಪರಿಚಯ ಮೂರೇ ಪುಟದ್ದಾದರೆ ಇನ್ನು ಕೆಲವರದು ೨೦ಕ್ಕೂ ಮೇಲ್ಪಟ್ಟು ಬಂದಿದೆ. ಜೊತೆಗೆ ಪಾವೆಂ. ಅವರದೇ ಸಂದರ್ಶನ ರೂಪದ ವಿಚಾರಧಾರೆ ವಿವರವಾಗಿ ಬಂದಿದೆ. ಈ ಸಾಹಿತ್ಯಿಕರ ಜೀವನದ ಬಗ್ಗೆ ವಿಶೇಷವಾಗಿ ಹೇಳದೆ ಅವರ ಸಾಹಿತ್ಯ ಕಾರ್ಯದ ಮೇಲೆ ಪಾವೆಂ. ಹೆಚ್ಚಿನ ಬೆಳಕನ್ನು ಚೆಲ್ಲಿದ್ದಾರೆ; ಅವರ ಕೃತಿಗಳ ವಿಮರ್ಶನಕ್ಕೆ ಒತ್ತುಕೊಟ್ಟಿದ್ದಾರೆ. ಅವರುಗಳಲ್ಲಿ ಶಂ. ಬಾ. ಜೋಶಿಯವರ ಬಗ್ಗೆ ಬಹು ಆಳವಾದ ವಿವೇಚನೆ ಬಂದದ್ದು ಒಳ್ಳೆಯದಾಯಿತು. ಕಾರಣವೆಂದರೆ ಅವರ ಸಂಶೋಧನೆಯೆಂಬುದು ಉಕ್ಕಿನ ಕಡಲೆ. ಅವರನ್ನು ಪೂರ್ತಿ ಅರ್ಥಮಾಡಿಕೊಂಡವರು ಒಬ್ಬಿಬ್ಬರು ಮಾತ್ರ - ಪಾವೆಂ ಅವರೂ ಸೇರಿ.

ಅಡಿಗರ ನವ್ಯಕಾವ್ಯವನ್ನು ಅರ್ಥವಿಸುವುದೂ ಕಷ್ಟದ್ದೇ. ಆದರೂ ಪಾವೆಂ. ಸಮರ್ಪಕವಾಗಿ ಮಾಡಿದ್ದಾರೆಂದೆನಿಸುವುದು. ಈ ವಿಷಯಕ್ಕೆ ಸಂಬಂಧಿಸಿದ ಒಂದು ಮೋಜಿನ ಪ್ರಸಂಗವಿದೆ. ಧಾರವಾಡದಲ್ಲಿ ಒಮ್ಮೆ ದ.ಬಾ. ಕುಲಕರ್ಣಿಯವರ ಮನೆಯಲ್ಲಿ ಅಡಿಗರು, ಪಾವೆಂ, ಮತ್ತೆ ಒಬ್ಬಿಬ್ಬರು ಕುಳಿತು ಅಡಿಗರ ಕಾವ್ಯದ ಬಗ್ಗೆ ಔಪಚಾರಿಕವಾಗಿ ಮಾತಾಡುತ್ತಿದ್ದಾಗ ಅವರ ಒಂದು ಪದ್ಯದ ವಿಶ್ಲೇಷಣೆಯನ್ನು ಪಾವೆಂ. ಮಾಡಿದರು. "ಅರೇ ಈ ಅರ್ಥ ನನಗೇ ಹೊಳೆದಿರಲಿಲ್ಲ" ಎಂದು ಅಡಿಗರು ಉದ್ಗಾರವೆತ್ತಿದರಂತೆ.

ಪಾವೆಂ ಸ್ವಲ್ಪವೇ ವಾಕ್ಯಗಳಲ್ಲಿ ವ್ಯಕ್ತಿ ಚಿತ್ರವನ್ನು ಮೂಡಿಸಿದ್ದಕ್ಕೆ ಇದೊಂದು ಮಾದರಿ:

'ಒಳಗಿನಂತೆ ಹೊರಗೂ ಭವ್ಯ ವ್ಯಕ್ತಿತ್ವದ ಈ ಮಹಾಕವಿ, ಮಹಾ ಕಾದಂಬರಿಕಾರ, ಕನ್ನಡ ಸಾಹಿತ್ಯಕ್ಕೆ ಹೊಸ ವ್ಯಕ್ತಿತ್ವವನ್ನಿತ್ತವರಲ್ಲಿ ಒಬ್ಬರು. ಬದುಕಿನಲ್ಲಿ ಬಹಳ ಕಂಡವರು, ಕಷ್ಟವನ್ನು ಉಂಡವರು. ಆದರೂ ಕಹಿಯಾಗದವರು. ಭಾರತದಲ್ಲಿ ಕನ್ನಡಕ್ಕೆ ಒಂದು ಸ್ಥಾನ ದೊರಕಿಸಲು ಶ್ರಮಿಸಿದವರು, ಗೋಕಾಕರು.'

ಪಾವೆಂ. ಅವರ ಪರಮ ಮಿತ್ರರಾಗಿದ್ದ ದ.ಬಾ. ಕುಲಕರ್ಣಿಯವರ ವ್ಯಕ್ತಿ ಚಿತ್ರಣವನ್ನು ಇಲ್ಲಿ ಕಾಣಿಸಲೇ ಬೇಕು. ಪಾವೆಂ. ಪ್ರತಿ ರವಿವಾರ ಹುಬ್ಬಳ್ಳಿಯಿಂದ ಧಾರವಾಡಕ್ಕೆ ಬಂದು ಅವರ ಮನೆಗೆ ಹೋಗುತ್ತಿದ್ದರು. ಅವರು ಅಕಸ್ಮಾತ್ತಾಗಿ ತೀರಿ ಹೋದಾಗ ಪಾವೆಂ. ನಿಜಕ್ಕೂ ದುಃಖ ಪಟ್ಟರು. ಆ ಕುರಿತು ಪಾವೆಂ. ಒಂದು ಶೋಕಗೀತೆಯನ್ನು ಬರೆದರು. 'ಜಗದ ಕುಂಟುಕೋರೆಗಳನ್ನು ಕಾಣುತ್ತಿದ್ದರು. ಕೌತುಕದಿಂದ ನಗುತ್ತಿದ್ದರು' ಎಂದು ಹೇಳಿದ ಮಾತನ್ನೇ ಗೀತರೂಪದಲ್ಲಿ ಹೀಗೆ ಕಾಣಿಸಿದ್ದಾರೆ:

ದತ್ತನ ನೆನಪು
ನಾನಳುವೆನಲ್ಲ ದತ್ತನಿಗಾಗಿ, ಯಾವನಿಗೆ
ಅಳುವೆ ಪ್ರಕೃತಿಗೆ ದೂರವಾಗಿತ್ತೊ ಅವಗಾಗಿ
ಅಳುವುದೊಂದಪಚಾರ...... ಅವನೆಂದೂ
ರೋದನಕೆ ಹುಟ್ಟಲಿಲ್ಲೆಂಬಂತೆ ಬಾಳಿದನು; ಕಡು ಮಾಗಿ
ಯಲ್ಲಿಯೂ ಬಾಡಲಿಲ್ಲದುದೊಂದು ಹೂವಾಗಿ.
ದುಃಖಿಗಳ ವಿಧಿ ಆತನ ವಶಕ್ಕೆ
ಕೊಳಗ ಕೊಳಗವೆ ಅಳೆದು ಕೊಟ್ಟಿದ್ದರೇನಾಯ್ತು?
ನಗುವೆಂಬ ಸಹಚರನನವಗೆ ಗಂಟಿಕ್ಕಿ
ಕಳಿಸಿದ್ದ.......

ಮೇಲಣ ಸಾಹಿತ್ಯಿಕರನ್ನೊಳಗೊಂಡ 'ಹೊಸಗನ್ನಡದ ಹಿರಿಯರು' ಪುಸ್ತಕದ ಉತ್ತರಾರ್ಧದಲ್ಲಿ ಪ್ರಾಚೀನ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖಗಳಿವೆ; ಸಂಸ್ಕೃತ, ಕನ್ನಡ, ಜೊತೆಗೆ ಭಾಷಾವಿಷಯ ಲೇಖಗಳು. ಇವುಗಳಲ್ಲಿ ಪಾವೆಂ. ಕೆಲವು ಸ್ವೋಪಜ್ಞ ವಿಚಾರಗಳನ್ನು ಮಂಡಿಸಿದ್ದಾರೆ. ಕುಮಾರವ್ಯಾಸನನ್ನು ಕುರಿತ ಮನನೀಯ ಲೇಖವು ಇದಕ್ಕೆ ಉದಾಹರಣೆ. ನೇಮಿಚಂದ್ರನ ಒಂದು ಪರಿಚಿತವಲ್ಲದ, ಓದಿದಾಗ ಮಹತ್ವದ್ದೆಂದು ಅನಿಸದ, ಒಂದು ಪದ್ಯವನ್ನು ಪಾವೆಂ. ಅರ್ಥವಿಸಿದ್ದ ರೀತಿ ಅಪೂರ್ವವಾದದ್ದು. ಜೈನ ಮುನಿಯೊಬ್ಬ ಅಹಿಂಸೆಯ ಪರಮೋಚ್ಚತಮವನ್ನು ತೋರ್ಪಡಿಸಿದ್ದು ಅಲ್ಲಿ ಕಂಡು ಬರುತ್ತದೆ. ಪಾವೆಂ. ಗಮನಕ್ಕೆ, ಮೂಲೆಯಲ್ಲಿದ್ದ ಆ ಪದ್ಯ ಬಂದಿತಾದರೂ ಹೇಗೆ? ಎಂದು ಅಚ್ಚರಿ ಎನಿಸುತ್ತದೆ.

ಸಂಸ್ಕೃತ ಸಾಹಿತ್ಯಕ್ಕೆ ಸಂಬಂಧಿಸಿದ ಐದಾರು ಲೇಖಗಳು ವಿಷಯದ ದೃಷ್ಟಿಯಿಂದ ರೋಚಕವಾಗಿವೆ. ಆ ಸಾಹಿತ್ಯದಲ್ಲಿಯ ಶೃಂಗಾರಕ್ಕೆ, ತೆಳುಹಾಸ್ಯ ನಿರೂಪಣೆಗೆ ಅಲ್ಲಿ ಪ್ರಧಾನ. ಓದಿ ಖುಶಿಪಡುವಂತಹಗಳು.

ಇನ್ನು ಭಾಷಾ ವಿಚಾರದ ಲೇಖಗಳಲ್ಲಿ ನಮಗೆ ಅಚ್ಚರಿಯೇ ಕಾದಿದೆ. ವಿವಿಧ ಭಾಷೆಗಳ ಗತಿ ಎಂಬ ಲೇಖದಲ್ಲಿ ಪ್ರಸ್ತಾಪಗೊಂಡಿರುವ, ಆಸ್ಟ್ರೇಲಿಯಾದ 'ಅರಂಟಾ' ಭಾಷೆ. ಅಂದಮಾನದ 'ನಿಗ್ರಿಟೊ' ಭಾಷೆ ಇವುಗಳ ಹೆಸರನ್ನಾದರೂ ಅದಾರು ಕೇಳಿದ್ದಾರೆ? ಪ್ರಸಂಗಾನುಸಾರ ಪಾವೆಂ. ಅವುಗಳ ವೈಶಿಷ್ಟ್ಯವನ್ನು ವಿವರಿಸಿದ್ದಾರೆ. ಮಲಯಿ ಭಾಷೆಯಲ್ಲಿ ಹೊಡೆಯುವುದಕ್ಕೆ, ಅಂದರೆ ವಿವಿಧ ರೀತಿಯಲ್ಲಿ ಪೆಟ್ಟು ಕೊಡಲಿಕ್ಕೆ ೧೫ ಬೇರೆ ಬೇರೆ ಶಬ್ದಗಳಿವೆಯಂತೆ. ಮೋಜೆಂದರೆ ಯಾವುದೊಂದು ವಿಷಯದ ಮಂಡನ ಮಾಡುವಾಗ ಅದಕ್ಕಿಂತ ಅತಿ ದೂರವಾಗಿರುವ ಬೇರೊಂದು ಅಂಶವನ್ನು ಸಯುಕ್ತಿಕವಾಗಿಯೇ ತರುತ್ತಾರೆ. 'ಸಂಸ್ಕೃತ' ಶಬ್ದದ ವ್ಯುತ್ಪತ್ತಿಯನ್ನು ಹೇಳುವಾಗ ಬರ್ನಾರ್ಡ್ ಶಾ ಏಕೆ ಬರಬೇಕು? ಇದಕ್ಕೆ ಉತ್ತರ ಒಂದೇ; ಆಚಾರ್ಯರ ಬಹುಶ್ರುತತ್ವ ಹಾಗೂ ಸಮಯೋಚಿತತೆ.



# ೭. ಚಿಂತನಪರ ಬರಹಗಳು

ಪಾವೆಂ. ಆಚಾರ್ಯರು ವಿಡಂಬನಕಾರರು ಮಾತ್ರವಲ್ಲ. ಬಹುಶ್ರುತರೂ ವಿಚಾರವೇತ್ತರೂ ಆಗಿದ್ದರು. ಹೀಗಾಗಿ ಅನೇಕ ಚಿಂತನಪರ ಲೇಖನಗಳನ್ನು ಬರೆದಿದ್ದಾರೆ. ಬದುಕಿನ ವಿಶ್ಲೇಷಣೆಯುಳ್ಳ ಹಾಗೂ ಅನುಭವಜನ್ಯ ವಿಚಾರಗಳಿವು.

ಇಂಥ ಲೇಖನಗಳನ್ನು ಧಾರ್ಮಿಕ, ಶೈಕ್ಷಣಿಕ ಹಾಗೂ ಸಾಮಾಜಿಕ ವಿಶ್ಲೇಷಣೆಯ ಪ್ರಬಂಧಗಳೆಂದು ಸ್ಥೂಲವಾಗಿ ವಿಭಾಗಿಸಬಹುದು. ಧಾರ್ಮಿಕ ಎನ್ನುವದರಲ್ಲಿಯೂ ತಾತ್ವಿಕ ವಿಚಾರಗಳೇ ಎದ್ದು ಕಾಣುವಂತಿವೆ. ಧರ್ಮಸಂಕಟವನ್ನು ಹೇಗೆ ಎದುರಿಸಬೇಕು? ಎಂಬಂಥ ಲೇಖನಗಳಲ್ಲಿ ತಾರ್ಕಿಕ ವಿವೇಚನೆ ಕಂಡು ಬರುತ್ತದೆ.

'ನನ್ನ ದೃಷ್ಟಿಯಲ್ಲಿ ಧರ್ಮ' ಎಂಬ ಲೇಖನ ಇಲ್ಲಿ ಹೆಚ್ಚು ಪ್ರಸ್ತುತ. ಧರ್ಮ ಎಂದರೆ ಧರಿಸುವಂಥಾದ್ದು, ಎತ್ತಿ ಹಿಡಿಯುವಂಥಾದ್ದು. ಏನನ್ನು ಎತ್ತಿ ಹಿಡಿಯುವಂಥಾದ್ದು ಎಂದರೆ ಮನುಷ್ಯ - ಪ್ರಪಂಚವನ್ನು, ಎಂದು ಉತ್ತರಿಸಬೇಕಾಗುತ್ತದೆ ಎಂದರೆ ಈ ಪ್ರಪಂಚ ಸೃಷ್ಟಿಯಾದಾಗಿನಿಂದ ಅನೂಚಾನವಾಗಿ ನಡೆದು ಬಂದದ್ದನ್ನು ಮುಂದುವರಿಸಿದರೆ ಅದು ನಮ್ಮ ಧರ್ಮ. ಹೀಗೆ ಅವರ ದೃಷ್ಟಿಯಲ್ಲಿ ಧರ್ಮ ಎಂಬುದು ಸಮಷ್ಟಿಯಲ್ಲಿ ವ್ಯಷ್ಟಿಯ ನಡವಳಿಕೆಯನ್ನು ನಿರೂಪಿಸುವುದು. ಆ ನಡವಳಿಕೆ ಎಂದರೆ ಒಬ್ಬರೊಬ್ಬರಲ್ಲಿ ಒಡನಾಟ. ಅದರಿಂದ ಸಂಬಂಧ ಪಟ್ಟವರ ಹಿತವನ್ನು ಹೆಚ್ಚಿಸಬಹುದು. ಆದ್ದರಿಂದ ಒಡನಾಟವೇ ಧರ್ಮ. ಈ ಒಡಂಬಡಿಕೆ ಅಥವಾ ಒಡನಾಟವು ಮನುಷ್ಯ ಜಾತಿಯ ಉಳಿವು, ಬಾಳುವೆಗಳಿಗೆ ತಳಹದಿ. ಈ ಧರ್ಮಪಾಲನೆಯಲ್ಲಿ ಇದು ಅವಶ್ಯವಾಗಿ ಬೇಕು. ಹೀಗೆ ಈ ಪ್ರಬಂಧದುದ್ದಕ್ಕೂ ತಾತ್ವಿಕ ವಿವೇಚನೆಯೇ ಪ್ರಧಾನವಾಗಿದೆ.

ಇತರ ಚಿಂತನಪರ ಲೇಖನಗಳಲ್ಲಿ 'ಬುದ್ಧಿಜೀವಿ, ಸಮಾಜ ಮತ್ತು ಸಾಹಿತ್ಯ', 'ಮಾನವಪ್ರವೃತ್ತಿ ಮತ್ತು ಮೌಲ್ಯಗಳು', 'ಪ್ರಜ್ಞಾವಾದ; ದಿಟ ಮತ್ತು ಸಟೆ' ಇವುಗಳಲ್ಲಿಯೂ ಇಂಥದೇ ಬೌದ್ಧಿಕ ತಳಹದಿ ಇದೆ. ಪಾವೆಂ ಅವರನ್ನು ಹುಬ್ಬಳ್ಳಿಯ ರೋಟರಿ ಸಂಸ್ಥೆಯು

ಭಾಷಣಕ್ಕೆ ಆಮಂತ್ರಿಸಿದ್ದಾಗ, ಸಾಮಾಜಿಕ ಮನೋವೃತ್ತಿ ಮತ್ತು ಸಮಾಜದಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಕುರಿತು ಉದ್ಬೋಧಕವೆನಿಸುವ ಉಪನ್ಯಾಸ ಮಾಡಿದ್ದು ಸಂಸ್ಥೆಯ ಮಾಮೂಲಿ ಭಾಷಣ ಕಾರ್ಯಕ್ರಮಗಳಿಗಿಂತ ಎಷ್ಟೋ ಭಿನ್ನವಾಗಿದ್ದಿತು. ಬಹುಕಾಲ ಅವರು ನೆನೆಯುವಂಥದಾಗಿತ್ತು.

ಶೈಕ್ಷಣಿಕ ಮೂಲದ ಲೇಖನಗಳು ವ್ಯಾವಹಾರಿಕ ಪಾತಳಿಯಲ್ಲಿ ಕಾಣಿಸಿಕೊಂಡಿವೆ. ಶಿಕ್ಷಣ ಮತ್ತು ಜೀವನ ಮೌಲ್ಯಗಳ ವಿವೇಚನೆ ಒಂದು ಲೇಖನದಲ್ಲಿ ಇದ್ದರೆ, ಉಚ್ಚಶಿಕ್ಷಣದ ಗುರಿ ಏನೆಂಬುದನ್ನು ಇನ್ನೊಂದರಲ್ಲಿ ವಿವೇಚಿಸಲಾಗಿದೆ. ಯುವಕರು ಮತ್ತು ವಿದ್ಯಾರ್ಥಿಗಳ ಗುರಿ ಏನಿರಬೇಕೆನ್ನುವುದರಲ್ಲಿ ಉಪದೇಶವೇನೂ ಇಲ್ಲ. ಬದಲಾಗಿ ಅವರನ್ನು ಸೂಕ್ತ ವಿಚಾರದತ್ತ ಕೊಂಡೊಯ್ದಿದ್ದಾರೆ.

ಸಾಮಾಜಿಕ ವಿಶ್ಲೇಷಣೆಯಲ್ಲಿ ಎಲ್ಲ ಕಾಲಕ್ಕೂ ನೆನಪಿನಲ್ಲಿ ಉಳಿಯಬೇಕಾದ ಲೇಖವೆಂದರೆ 'ಬ್ರಾಹ್ಮಣರೇನು ಮಾಡಬೇಕು?' ಅದೊಂದು ಜ್ವಲಂತ ಸಮಸ್ಯೆಯ ನಿರ್ವಿಕಾರ ವಿವೇಚನೆ.

೧೯೬೦ನೆಯ ದಶಕದಿಂದ ನಡೆದು ಬಂದ ಒಂದು ತಪ್ಪು ಅಭಿಪ್ರಾಯವೆಂದರೆ ಬ್ರಾಹ್ಮಣರು ಮುಂದುವರಿದವರು; ಮಾತ್ರವಲ್ಲ ಇತರರನ್ನು ಶೋಷಿಸುವವರು, ವಿದ್ಯೆಯನ್ನು ಗುತ್ತಿಗೆ ಹಿಡಿದವರು, ಇತರ ಜಾತಿಯವರ ಸೌಲಭ್ಯಗಳನ್ನು ಕಸಿದುಕೊಳ್ಳುವವರು - ಇತ್ಯಾದಿಯಾಗಿ ಕೆಲವು ಸಾಹಿತಿಗಳು ಮಾಡುತ್ತಿದ್ದ ಮಿಥ್ಯಾರೋಪಗಳ ನಿರಾಕರಣೆ ಇಲ್ಲಿದೆ. ಹಾಗೆಂದು ಈ ವಿವೇಚನೆ ಏಕಪಕ್ಷೀಯವಲ್ಲ. ಬ್ರಾಹ್ಮಣ ವರ್ಗದವರ ತಪ್ಪುಗಳನ್ನೂ ತೋರಿಸಿ ಎಚ್ಚರಿಸಿದ್ದಾರೆ.

ಬ್ರಾಹ್ಮಣರು V/s ಶೂದ್ರರು ಎಂಬ ಧರತಿಯಲ್ಲಿ ಈ ಆರೋಪ ಮುಂಬಂದರೂ, ಅವರವರುಗಳ ಜಾತಿಯವರೂ ಯಾವ ರೀತಿ ಶೋಷಣೆ ಮಾಡುತ್ತಾರೆ; ಅಲ್ಲಿಯೂ ಪುರೋಹಿತಶಾಹಿ ಇದೆ ಎಂಬುದನ್ನು ಸೋದಾಹರಣವಾಗಿ ಈ ಲೇಖದಲ್ಲಿ ತೋರಿಸಿದ್ದಾರೆ. `ವಿದ್ಯೆ' ಎಂಬುದನ್ನು ಬ್ರಾಹ್ಮಣರು ಗುತ್ತಿಗೆ ಹಿಡಿದವರು. ಬ್ರಾಹ್ಮಣರ ಮೆದುಳು ಇತರರದಕ್ಕಿಂತ ಶ್ರೇಷ್ಠ - ಎಂದೆಲ್ಲ ಆರೋಪವಿದೆಯಷ್ಟೆ. ವ್ಯಂಗ್ಯವೆಂದರೆ, ಬ್ರಾಹ್ಮಣರೇ ವಿದ್ಯೆಯ ವಿಷಯದಲ್ಲಿ ತಾವು ಮುಂದುವರಿದವರು, ಜಾತ್ಯತಃ ಇತರರಿಗಿಂತ ಬುದ್ಧಿವಂತರು ಎಂಬ ಭ್ರಾಮಕ ಕಲ್ಪನೆಯಲ್ಲಿದ್ದುದನ್ನು ಪಾವೆಂ. ಎತ್ತಿ ತೋರಿಸಿದ್ದಾರೆ. ಇಂಥ ವಿದ್ಯೆಯ ಬಲವಿದ್ದೂ ಏನು ಪ್ರಯೋಜನವಾಗಿದೆ- ಆರ್ಥಿಕವಾಗಿ? ಸಾಮಾನ್ಯ ಬ್ರಾಹ್ಮಣನು ಮಧ್ಯಮ ಜಾತಿಯವರಿಗಿಂತ ಬಡವನೇ ಇದ್ದಾನೆ. ಅದರಲ್ಲಿಯೂ ಭೂಸುಧಾರಣಾ ಕಾಯ್ದೆಯಿಂದಾಗಿ ಮತ್ತಷ್ಟು ಬಡವನಾದ. ಇತ್ತ ಒಂದು ಕಾಲಕ್ಕೆ ಸರಕಾರೀ ನೌಕರಿಗಳಲ್ಲಿ ಬ್ರಾಹ್ಮಣರೇ ಹೆಚ್ಚಾಗಿ ಇದ್ದರು. ಆದರೆ ಪಾಶ್ಚಾತ್ಯ

ಆಡಳಿತದ ಪರಿಸರದಲ್ಲಿ ಅದೊಂದು ಐತಿಹಾಸಿಕ ಅನಿವಾರ್ಯವಾಗಿದ್ದಿತು. ಇತರ ಮಧ್ಯಮ ಜಾತಿಯವರಿಗೆ ಕೃಷಿ, ವ್ಯಾಪಾರ, ಕೈಕಸಬು ಮುಂತಾದ್ದರಲ್ಲಿ ಚೆನ್ನಾದ ಗಳಿಕೆ, ಪ್ರವೀಣತೆ ಇತ್ತಾದ್ದರಿಂದ ಅವರಿಗೆ ವಿದ್ಯಾರ್ಜನೆಯ ಅಗತ್ಯ ಇದ್ದಿತೆಲ್ಲಿ? ಇಲ್ಲಿ ತಿಳಿಯಬೇಕಾದ ಮಾತೆಂದರೆ ಬ್ರಾಹ್ಮಣನ ಮೆದುಳೇನೂ ಶ್ರೇಷ್ಠತಮವಲ್ಲ; ವಿದ್ಯೆಯ ಒಲವು ಅವನಲ್ಲಿ ಜೀವನಾಡಿ ಎನಿಸಿದ್ದಿತು ಮತ್ತು ಅದರಲ್ಲಿ ನೈಪುಣ್ಯವನ್ನು ಪಡೆಯಬೇಕೆಂಬ ಛಲವೂ ಇದೆ. ಈವೊಂದು ನಿರ್ವಿಕಾರದ ನಿಲುಮೆಯನ್ನು ವಿವರಿಸುತ್ತ ಪಾವೆಂ. ಕೊನೆಯಲ್ಲಿ ಬ್ರಾಹ್ಮಣವರ್ಗಕ್ಕೆ ಕೆಲವು ಮನನೀಯ ಸೂಚನೆಗಳನ್ನು ಮಂಡಿಸಿದ್ದಾರೆ. ಸಮಾಜ ಜೀವಿಗಳಲ್ಲಿ ತಾನೇ ಶ್ರೇಷ್ಠ ಎಂಬ ಭಾವನೆ ಕೈಬಿಡಬೇಕು. ವಿದ್ಯಾರ್ಜನೆಯಲ್ಲದೆ ಬೇರೆ ಉದ್ದೇಶಗಳು ತಮ್ಮ ಗೌರವಕ್ಕೆ ಕುಂದು ಎಂದು ತಿಳಿಯಬಾರದು. ಜಾತಿಯ ನಿಮಿತ್ತದಿಂದ ಅಗೌರವ ಪ್ರಸಂಗ ಬಂದರೆ ಆತ್ಮರಕ್ಷಣೆ ಮಾಡಿಕೊಳ್ಳಬೇಕು, ಇತ್ಯಾದಿ.

೧೯೪೮ರಲ್ಲಿ ಈ ಲೇಖನ ಪ್ರಕಟವಾದ ಮೇಲೆ ವಿರೋಧದ ಪ್ರತಿಕ್ರಿಯೆಗಳು ಬಂದದ್ದು ಸ್ವಾಭಾವಿಕವೇ ಆಗಿದ್ದಿತು. ಮೆಚ್ಚಿಕೆಯ ಮಾತುಗಳೂ ಕೇಳ ಬಂದವು. ಬ್ರಾಹ್ಮಣ ಪಕ್ಷಪಾತೀ ಲೇಖನ ಎಂದೇನಲ್ಲ; ನಿಚ್ಚಳವಾದ ವಿವೇಚನ ಎಂಬುದಾಗಿ. ಹಾಗೆ ಪತ್ರ ಬರೆದ ಮೊದಲಿಗರು ಓರ್ವ ಬ್ರಾಹ್ಮಣೇತರ ವೃದ್ಧರಂತೆ. ಇತರ ಪ್ರತಿಕ್ರಿಯೆಗಳಿಗೆ ಪಾ.ವೆಂ. ಉತ್ತರಿಸಿದ್ದಾರೆ. ಭಗವಾನ್ ಎಂಬುಪವರು ಸಂಕ್ರಮಣ ಸಂಚಿಕೆಯಲ್ಲಿ ಬರೆದ ನಿಂದಾವ್ಯಂಜಕ ಲೇಖನಕ್ಕೆ ಮಾತ್ರ ಪಾವೆಂ. ಅತ್ಯಂತ ಕಟುವಾಗಿ ಪ್ರತಿಕ್ರಿಯಿಸಿದ್ದಾರೆ. ಮಾರ್ಮಿಕತೆಯ ಪರಮಾವಧಿಯನ್ನು ತೋರಿಸಿದ್ದಾರೆ.



# ೮. ವಿಜ್ಞಾನ ವಿಸ್ಮಯ

Necessity is the mother of invention ಎಂಬುದು ಇಂಗ್ಲೀಷಿನ ಒಸಗೆಯಾದರೆ ಕನ್ನಡದಲ್ಲಿ ನಾವು ಪಾವೆಂ. ಅವರ ವೈಜ್ಞಾನಿಕ ಬರವಣಿಗೆಯನ್ನು ಅನುಲಕ್ಷಿಸಿ, 'ಅತ್ಯಗತ್ಯವೆ ಆವಿಷ್ಕಾರದ ಪ್ರಾಣ' ಎಂದು ಹೇಳಬೇಕೆನಿಸುವುದು. ಕಸ್ತೂರಿಯಂಥ ಡೈಜೆಸ್ಟ್ ಪತ್ರಿಕೆಯಲ್ಲಿ ವಿಜ್ಞಾನದ ಲೇಖನಗಳನ್ನು ಬರೆಯಿಸಿ, ಪ್ರಕಟಿಸಬೇಕು. ಸರಿಯೇ. ಆದರೆ ಪ್ರತಿ ಸಂಚಿಕೆಯಲ್ಲಿಯೂ ಒಂದಾದರೂ ವಿಜ್ಞಾನ ವಿಷಯಕ ಲೇಖ ಬರಲೇಬೇಕು. ಅದೂ ಆಚಾರ್ಯರಿಗೆ ಸಮರ್ಪಕವಾಗಿರುವಂತೆ ಬರೆಯುವವರು ಬೇಕು. ಎಷ್ಟು ಜನರಿದ್ದಾರೆ ಕನ್ನಡದಲ್ಲಿ ಬರೆಯುವವರು? ಅದೂ ಐವತ್ತು ವರ್ಷಗಳ ಹಿಂದೆ? ವಿಜ್ಞಾನ ಪದವೀಧರರೇನೋ ಬೇಕಾದಷ್ಟು ಜನರಿದ್ದಾರೆ. ಬರೆಯುವವರು? ಅದೂ ಸಾಮಾನ್ಯ ಓದುಗರು ತಿಳಿಯುವಂತೆ ಶುದ್ಧ ಸುಸ್ಪಷ್ಟ ಕನ್ನಡದಲ್ಲಿ?!

ಸರಿ, ಎಸ್.ಎಸ್.ಎಲ್.ಸಿ. ವರೆಗೆ ವಿಜ್ಞಾನದ ಪಾಠಗಳನ್ನು ಓದಿದ್ದ ಪಾವೆಂ ತಮ್ಮ ಧೋತರದ ಚುಂಗನ್ನು ಸೊಂಟಕ್ಕೆ ಸಿಕ್ಕಿಸಿ ತಾವೇ ಸಿದ್ಧರಾದರು. ಓನಾಮದಿಂದ ವಿಜ್ಞಾನ ಲೇಖಗಳನ್ನು - ಇಂಗ್ಲೀಷ್‌ನಲ್ಲಿ ಬಂದವುಗಳನ್ನು ಅಖಂಡವಾಗಿ ಓದಿದರು. ಒಂದು ವಿಷಯವನ್ನು ಗಮನದಲ್ಲಿರಿಸಿಕೊಂಡು, ಅದರ ಪೂರ್ತತೆಗೆ ಬೇರೆ ಲೇಖಗಳನ್ನು ಓದುವುದು. ತಿಳಿಯದಿದ್ದ ಅಂಶಗಳ ಬಗ್ಗೆ ಧಾರವಾಡಕ್ಕೆ ಹೋಗಿ ಪರಿಣತರನ್ನು ಕೇಳುವುದು.

ಮುಗಿಯಲಿಲ್ಲ ಅವರ ಪಡಿಪಾಟಲು. ಸೂಕ್ತವಾದ ಕನ್ನಡ ಪಾರಿಭಾಷಿಕ ಪದಗಳನ್ನು ಸೃಷ್ಟಿಸಬೇಕು. ಈ ವಿಷಯದಲ್ಲಿ ಅವರ ಸಂಸ್ಕೃತ ಪರಿಜ್ಞಾನ ತುಂಬಾ ನೆರವಾಯಿತು. ಅದೊಂದು ವ್ರತವೆಂಬಂತೆ ಶ್ರದ್ಧೆಯಿಂದ ಒಂದೊಂದು ವಿಜ್ಞಾನದ ವಿಷಯಗಳನ್ನೆತ್ತಿಕೊಂಡು ಬರೆಯುತ್ತ ಬರೆಯುತ್ತ, ಕಸ್ತೂರಿಯಿಂದ ನಿವೃತ್ತರಾಗುವಷ್ಟರಲ್ಲಿ ಕನ್ನಡದ ಗಣ್ಯ ವಿಜ್ಞಾನ ಲೇಖಕರೆನಿಸಿಬಿಟ್ಟರು.

ಅವೆಲ್ಲ ಲೇಖನಗಳನ್ನು ಪ್ರೊ. ಎಸ್ಸೆಲ್. ಶ್ರೀನಿವಾಸಮೂರ್ತಿಯವರು ಸಂಪಾದಿಸಿದ್ದಾರೆ. ಖಗೋಳ ವಿಜ್ಞಾನ, ಪದಾರ್ಥ ವಿಜ್ಞಾನ, ಸಸ್ಯ-ಪ್ರಾಣಿ ಪ್ರಪಂಚ, ಜೊತೆಗೆ ಮನೋವಿಜ್ಞಾನವೂ ಪಾವೆಂ. ಅವರ ಗಮನ ಸೆಳೆದಿದೆ. ಆದರೆ ಹೆಚ್ಚಿನ ಪಾಲು ವೈದ್ಯಕೀಯಕ್ಕೆ ಸಂದಿದೆ. ಈ ಕುರಿತು ಜನರ ಅರೆಬರೆ ಜ್ಞಾನ ಮತ್ತು ಅಜ್ಞಾನ ಇವನ್ನು ಹೋಗಲಾಡಿಸುವುದು ಅವರ concern ಆಗಿದ್ದಿತು. ಜೊತೆಗೆ ರೋಗಗಳ ಸ್ವರೂಪವನ್ನು ತಿಳಿದು ಜನ ಆರೋಗ್ಯವಂತರಾಗಿರಬೇಕೆಂಬುದೂ ಅವರ ಆಶಯವಾಗಿದ್ದಿತು. ಆಸ್ಪಿರಿನ್ ನಿರುಪದ್ರವಿಯೆ? ಮಧುಮೇಹವು ಹೌದೋ ಅಲ್ಲವೋ? ಎಚ್ಚರಿಕೆ ಪೆನಿಸಿಲಿನ್! ಎಂಬ ಶೀರ್ಷಿಕೆಗಳು ಅವರು ಎತ್ತಿಕೊಂಡಿರುವ ಸಮಸ್ಯೆಗಳ ಕಲ್ಪನೆ ಕೊಡಬಲ್ಲವು.

ಖಗೋಳ ವಿಜ್ಞಾನದ ಬಗ್ಗೆ ಮನುಷ್ಯನ ಕುತೂಹಲಕ್ಕೆ ಕಾರಣವಾಗುವಂತಹ ವಿಷಯಗಳನ್ನೆತ್ತಿಕೊಂಡಿದ್ದಾರೆ. ಪ್ರತಿ ವಿಶ್ವ ಇರಬಹುದೆ? ಮಂಗಳಕ್ಕೆ ಮಾನವ ಯಾತ್ರೆಯೆ? ಈಗಾಗಲೇ ಶೋಧವಾದ ಚಂದ್ರ ಗ್ರಹಣಕ್ಕೆ ಇನ್ನು ಮೇಲೆ ಮನುಷ್ಯ ವಸತಿಯೇ? ಅದರಂತೆ ಪ್ರಾಣಿಲೋಕದಲ್ಲಿ ಬೆಕ್ಕು ಎಷ್ಟು ಜಾಣ ಪ್ರಾಣಿ? ಎಂಬ ಪ್ರಶ್ನೆಯಿಂದಲೇ ವಿಷಯವನ್ನು ವಿವರಿಸುತ್ತಾರೆ. ಡಿನೋಸಾರ್ ಬೃಹತ್ ಪ್ರಾಣಿಯ ಕುರಿತು ಅದ್ಭುತ ಚಲನಚಿತ್ರವೇ ಬಂತಲ್ಲ! ಆ ಪ್ರಾಣಿಯ ಬಗ್ಗೆ ಓದುಗರ ಆಸಕ್ತಿಯನ್ನು ಗಮನಿಸಿ ಪಾವೆಂ. ಲೇಖ ಬರೆದರು. ಇನ್ನು ಪತ್ರಿಕೆಯ ಹೆಸರನ್ನೇ ಹೊತ್ತಿರುವ ಕಸ್ತೂರಿ ಮೃಗದ ಬಗ್ಗೆ ಬರೆಯದಿದ್ದರೆ ಹೇಗೆ? ಬರೆದಿದ್ದಾರೆ.

ಗಮನಿಸಬೇಕಾದ ಮಾತೆಂದರೆ ಪಾವೆಂ. ಬೇರೆಯವರಿಂದಲೂ ವೈಜ್ಞಾನಿಕ ಲೇಖನಗಳನ್ನು ಬರೆಯಿಸುತ್ತಿದ್ದರು. ಹಾಗೆ ಬರೆಯುತ್ತಿದ್ದವರಲ್ಲಿ ಜಿ.ಟಿ. ನಾರಾಯಣರಾವ್ ಒಬ್ಬರು. ಇನ್ನು ಡಾಕ್ಟರ್ ಜನರು ಕಣ್ಣಿಗೆ ಬಿದ್ದರಂತೂ ಏನೇನೆಲ್ಲ ಪ್ರಶ್ನೆಗಳನ್ನು ಕೇಳಿ, ಲೇಖನ ಬರೆಯಿಸಿ ಆ ಮೇಲೆ ಅದಕ್ಕೆ ಪೂರಕ ಅಂಶಗಳನ್ನು ಸೇರಿಸಿ ಪ್ರಕಟಿಸುವ ಕ್ರಮ. ಹಾಗಿದ್ದರು. ವಿಜ್ಞಾನಿ ಪಾವೆಂ. ಆಚಾರ್ಯ.

ಹೀಗೆ ವಿಜ್ಞಾನದ ಕಹಿಗುಳಿಗೆ ಎನ್ನಿರಿ, ಬೇಕಿದ್ದರೆ ಉಕ್ಕಿನ ಕಡಲೆ ಎನ್ನಿರಿ -ಅದನ್ನು ಸಿಹಿ ಮಾಡಿ, ಇಲ್ಲವೆ ಮೃದುಗೊಳಿಸಿ ಕಸ್ತೂರಿಯ ಓದುಗರಿಗೆ ಉಣಬಡಿಸಿದರೆನ್ನಬಹುದು. ನವಕರ್ನಾಟಕದವರು ಪ್ರಕಟಿಸಿದ ಈ 'ವಿಜ್ಞಾನ ವಿಸ್ಮಯ'ವು ಮೂರೇ ವರ್ಷಗಳಲ್ಲಿ ಮೂರು ಆವೃತ್ತಿಯನ್ನು ಕಂಡಿದೆ ಎಂಬುದರಿಂದ ಆಚಾರ್ಯರ ಬರವಣಿಗೆಯ ಸುಭಗತೆಯನ್ನು ಮೆಚ್ಚಬಹುದಾಗಿದೆ.



# ೬. ಲಾಂಗೂಲಾಚಾರ್ಯರಾಗಿ -

ಲಾಂಗೂಲಾಚಾರ್ಯ - ಹೆಸರಿನ ಎಲ್ಲ ಬರಹಗಳೂ ಆಪಾತತಃ ಲಲಿತ ಪ್ರಬಂಧಗಳೇ ಎನ್ನಬೇಕು. 'ಹರಟೆ' ಎಂದರೆ ಹಾಸ್ಯ, ವಿಡಂಬನೆ ಎಂಬ ಅಂಶಗಳಷ್ಟೇ ಒಡೆದು ತೋರಬಹುದು. ಆದರೆ ಪಾಪಂ. ಆಚಾರ್ಯರ ಹರಟೆಗಳಲ್ಲಿ ಅವರ ವೈವಿಧ್ಯಮಯ ವಾಚನದ ಮಾರ್ಪೊಳವು ಇದ್ದೇ ಇರುತ್ತದೆ. ಆರಂಭಮಾಡಿದ ವಿಷಯಕ್ಕೆ ಎಲ್ಲೆಲ್ಲಿಯವೊ ವಿಚಾರಗಳು, ಹೆಸರುಗಳು ಬಂದು ಕೂಡಿಕೊಳ್ಳುತ್ತವೆ. ಒಟ್ಟಿನಲ್ಲಿ ಹೊಂದಿಕೊಂಡು ಹೋಗುವಂತೆ ಜೋಡಿಸುವ ಜಾಣ್ಮೆ ಪಾಪಂ. ಅವರ ಸ್ಪೆಶಾಲಿಟಿ.

ಅವರ ಲಲಿತ ಪ್ರಬಂಧಗಳ ಇನ್ನೊಂದು ವೈಶಿಷ್ಟ್ಯವೆಂದರೆ ಕ್ಷುಲ್ಲಕವೆನಿಸುವ ವಿಷಯವನ್ನೆತ್ತಿಕೊಂಡು ಗಂಭೀರವಾಗಿ ಬೆಳೆಸುತ್ತಾರೆ. ಇಲ್ಲವೆ ಸೀರಿಯಸ್ ಆಗಿ ವಿಷಯವನ್ನು ಆರಂಭಿಸಿ ಒಮ್ಮೆಲೆ ಕೆಳಗಿನ ಸ್ತರಕ್ಕೆ ಜರಿಯುತ್ತಾರೆ. ಪರಿಣಾಮ? ಗಿಡ್ಡ ಗಂಡ ಎತ್ತರದ ಹೆಂಡತಿ - ಈ ಜೋಡಿ ನೋಡಿದಾಗ ನಮ್ಮಲ್ಲಿ ಹೇಗೆ ನಗೆ ಮೂಡುವುದೋ, ಅದೇ ರೀತಿಯದು ಆಚಾರ್ಯರ ಹಾಸ್ಯದ ಬಗೆ.

ಹರಟೆಯೊಂದನ್ನು ಆರಂಭಿಸಲು ಏನಾದರೊಂದು ಘಟನೆ ನಿಮಿತ್ತವಾಗಿ ಬೇಕು. ಫಿರೋಜ್‌ಖಾನ್ ನೂನ್ ಎಂಬ ಪಾಕಿಸ್ತಾನದ ನಾಯಕನ ಹೆಂಡತಿಯ ಚಪ್ಪಲಿ ಜನಸಮ್ಮರ್ದದಲ್ಲಿ ಕಳಚಿ ಕೆಳಗೆ ಬಿತ್ತು. ಅಲ್ಲಿದ್ದ ಯಾರೊ ಅದನ್ನು ಎತ್ತಿಕೊಟ್ಟರು. ಆಚಾರ್ಯರೂ ಅದನ್ನೆತ್ತಿಕೊಂಡರು - ತಮ್ಮ ಹರಟೆಯಲ್ಲಿ! ಅಲ್ಲಿಂದ ಹಲವಾರು ಚಪ್ಪಲಿ ಹರಣ, ಚಪ್ಪಲಿಯೇಟಿನ ಘಟನೆಗಳು ಒಂದರ ಮೇಲೊಂದು ಪ್ರಸ್ತಾಪಗೊಂಡವು. ಸಿನೆಮಾ ನಟಿ ಶಾಂತಾ ಆಪ್ಟೆ ಓರ್ವ ಸಿನೆಮಾ ಪತ್ರಿಕೆಯ ಸಂಪಾದಕರಿಗೆ ಹೊಡೆದದ್ದು, ನಾಗಪುರದ ಮೂವರು ನಾರೀಮಣಿಗಳು ಇಬ್ಬರು ಬೀಪಿ ಕಾಮಣ್ಣರಿಗೆ ಚಪ್ಪಲಿಯಿಂದ ಇಕ್ಕರಿಸಿದ್ದು ಮುಂತಾದ

ಘಟನೆಗಳಿವೆ. ಅಲ್ಲಿಂದ ವಿಷಯ ಪವಿತ್ರವಾದ ಪಾದುಕೆಗಳತ್ತ ತಿರುಗುತ್ತದೆ. ಉದಾ.ಗೆ ಗಾಂಧೀಜಿ ಹೊಲಿದು ಕೊಟ್ಟಿದ್ದ ಚಪ್ಪಲಿಗಳನ್ನು ದಕ್ಷಿಣ ಆಫ್ರಿಕದ ಅಧ್ಯಕ್ಷ ಸ್ಮಟ್ಸ್ ರಾಮಾಯಣದ ಭರತನಂತೆ ಗೌರವದಿಂದ ಕಂಡದ್ದು.

ಅವರ ಲಲಿತ ಪ್ರಬಂಧಗಳಲ್ಲಿ ಪಾಶ್ಚಾತ್ಯರೂ ಸೇರಿದಂತೆ ವಿದ್ವಾಂಸರ, ಸಾಮಾಜಿಕ ಗಣ್ಯರ, ಸಾಹಿತಿಗಳ ಒಂದೆರಡು ಹೆಸರುಗಳಾದರೂ ತಪ್ಪದೇ ಬರುತ್ತವೆ. ಮಿಂಚಿ ಮಾಯವಾಗಿ ಬಿಡುತ್ತವೆ. ಎಷ್ಟೋ ಹೆಸರುಗಳು ನಾವು ಕೇಳಿಲ್ಲದವುಗಳು. ಉದಾಗೆ. ರೋಸ್ಟ್ಯಾಂಡ್ ಅಂತೆ. ಯಾರೀತ? ಹಾಗೇನೆ ಕವಿವರೇಣ್ಯರ ಉಕ್ತಿಗಳು ಅವರ ಬತ್ತಳಿಕೆಯಲ್ಲಿ ಸದಾ ಸಿದ್ಧವಿದ್ದು ನಿರಾಯಾಸವಾಗಿ ಅವರ ಲೇಖನಿಗೆ ಎಟಕುತ್ತವೆ. ಚಂದ್ರಲೋಕದಲ್ಲಿ ಮೈಭಾರ ಕಡಿಮೆಯಾಗಿ ಯಾರೂ ಜಿಗಿಯಬಹುದು; ಹೈಜಂಪಿನವರು ಹಾರಬಹುದು, ಎಂದು ವಿಜ್ಞಾನಿಗಳು ಹೇಳುತ್ತಾರೆ- ಎಂಬೀ ಅಂಶವನ್ನು ದಾಖಲಿಸುವಾಗ ಪಾವೆಂ. ಅವರಿಗೆ ಕುವೆಂಪು ಅವರ ಒಂದು ಸಾಲು ಥಟ್ಟನೆ ನೆನಪಾಯಿತು. 'ನೀ ಹಾರಬಲ್ಲೆಯ ನಾನೇರುವೆತ್ತರಕೆ?'

ಕವಿ ಬೇಂದ್ರೆ ಕಾಣಿಸಿಕೊಂಡ ಬಗೆ ವಿಶಿಷ್ಟವಾದುದು. 'ಶ್ರೀಮನ್ನಾರಾಯಣನ ನಿವೃತ್ತಿ' ಎಂಬ ಲಲಿತ ಪ್ರಬಂಧವಿದೆ. ಶ್ರೀಹರಿಯ ನಿವೃತ್ತಿಗೆ ಕಾರಣವೆಂದರೆ ದೇವದೇವತೆಗಳು ನಿಷ್ಕ್ರಿಯರಾಗಿ 'ಕೊಳೆಯದ ಶವ'ದಂತಾಗಿದ್ದಾರೆ ಎಂಬ ಕಾರಣ ಕೊಡುತ್ತಾನೆ. ಅದನ್ನು ಓದಿದ ನಾರದರಿಗೆ ಈ 'ಕೊಳೆಯದ ಶವ' ಎಂಬ ಪದವನ್ನು ಎಲ್ಲಿಯೊ ನೋಡಿದ ಹಾಗಿದೆ ಎಂದೆನಿಸಿತಂತೆ. ಹಾಂ! ಹೊಳೆಯಿತು. 'ಬೇಂದ್ರೆಯವರು ಈ ಶಬ್ದವನ್ನು coin ಮಾಡಿದ್ದು ಅದನ್ನು ಶ್ರೀಮನ್ನಾರಾಯಣನು ಎತ್ತಿಕೊಂಡಿದ್ದಾನಲ್ಲವೆ. ಒಂದು ರೀತಿಯಲ್ಲಿ ಇದು ಕೃತಿ ಚೌರ್ಯವೇ ಸರಿ.!'

ವಿರೋಧಾಭಾಸದಿಂದ ಹಾಸ್ಯವನ್ನು ಹೊಮ್ಮಿಸುವುದು ಪಾವೆಂ. ಅವರ ಇನ್ನೊಂದು ವೈಶಿಷ್ಟ್ಯ. ಸ್ತ್ರೀ ಮಗುವಿಗೆ ಮುತ್ತು ಕೊಡುತ್ತಾಳೆ. ತನ್ನ ಪ್ರಿಯಕರನಿಗೂ ಕೊಡುತ್ತಾಳೆ. ಎರಡರಲ್ಲಿಯೂ ಸುಖವಿದೆ. ಆದರೆ ಬಹಿರಂಗವಾಗಿ ಕೊಟ್ಟಾಗ? ಮಗುವಿನದು ಸಹ್ಯ. ಎರಡನೆಯದು ಅಪರಾಧ!

ಅದರಂತೆ ನೊಣ, ಸೊಳ್ಳೆಗಳ ಹೋಲಿಕೆ ಇನ್ನೊಂದು ಪ್ರಬಂಧದಲ್ಲಿ ಬಂದಿದೆ. ಸೊಳ್ಳೆಯ ಕಡಿತ ಸಮರ್ಥನೀಯ; ಏಕೆಂದರೆ ಅದಕ್ಕೆ ಹಸಿವಾಗಿರುತ್ತದಂತೆ. ಹಾಗೆ ಕಚ್ಚುವುದು ಯಾವಾಗಲೂ ಹೆಣ್ಣು ಸೊಳ್ಳೆಯೇ. ಅದೇನೂ ಅಪೂರ್ವವಲ್ಲವಂತೆ. ಯಾಕೆಂದರೆ ಸಾಮಾನ್ಯವಾಗಿ

ಸ್ತ್ರೀಯರೇ ಪುರುಷರ ರಕ್ತವನ್ನು ಹೀರುವವರು - ಎಂಬುದಾಗಿ ಆಚಾರ್ಯರ comment. ಆದರ
ನೊಣದ ಕಡಿತ ಮಾತ್ರ ದೋಷಪೂರಿತವಾದದ್ದಂತೆ. 'ಎಲ್ಲ ಹೇಡಿಗಳಂತೆ ನೊಣಗಳು ಕತ್ತಲೆಗ
ಅಂಜುತ್ತವೆ' ಎಂಬ ನಿಂದನೆ ಬೇರೆ. ಅಂದ ಹಾಗೆ ಈ ಕೀಟಗಳ ಮೇಲಿನ ಬರಹದಲ್ಲಿ ಬಲಾಢ್ಯನಾದ
ಚೆಂಗೀಸಖಾನನೂ ಸುಪ್ರಸಿದ್ಧ ತತ್ವವೇತ್ತನಾದ ಗೋರಖನಾಥನೂ ಬರುತ್ತಾರೆ. ಅದೇಕೆ ಎಂದು
ಕೇಳಬೇಡಿರಿ. ಅದು ಪಾಪಂ. ಅವರ ಹರಟೆಗಳ ವೈಶಿಷ್ಟ್ಯ.

ಅವರು ಅರ್ಧ ಶತಕದಷ್ಟು ಹರಟೆಗಳನ್ನು ಬರೆದಿರಬೇಕು. ಪುಸ್ತಕ ಸಂಗ್ರಹಗಳಲ್ಲಿ ಬಂದವುಗಳು ೧೫೦ ಮಾತ್ರ. ಉಳಿದವುಗಳನ್ನೂ ಪ್ರಕಟಿಸುವ ಕೆಲಸ ಆಗಲೇಬೇಕು ಎಂದೆನಿಸುವಷ್ಟು ಈಗ ಬಂದವುಗಳು ಚೇತೋಹಾರಿಯಾಗಿವೆ.



# ೧೦ ಪದಾರ್ಥ ಚಿಂತಾಮಣಿ

ಪಾ.ವೆಂ. ಆಚಾರ್ಯರು ಒಂದೆಡೆ ಹೇಳಿದ್ದಾರೆ:

"ಶಬ್ದಗಳ ಬಗ್ಗೆ ಮೊದಲಿನಿಂದಲೂ ನನಗೆ ಕುತೂಹಲ. ನಿವೃತ್ತ ಜೀವನದಲ್ಲಿ ಪದಗಳಿಗೂ ಅರ್ಥಗಳಿಗೂ ಇರುವ ಸಂಬಂಧಗಳನ್ನು ಹಿಂಜಿನೋಡುವ ಹವ್ಯಾಸ ಒಂದು ಗೀಳಾಗಿ ಅಮರಿಕೊಂಡಿತು. ಮೊದಲು ನನ್ನ ಲಹರಿಯನ್ನು ಉತ್ತೇಜಿಸಿದ ಕೆಲ ಪದಗಳನ್ನು ಬೆಂಬತ್ತಿ ನನಗೆ ಲಭ್ಯವಿದ್ದ ನಿಘಂಟು, ಇತಿಹಾಸಾದಿ ಗ್ರಂಥಗಳ ಸಹಾಯದಿಂದ ಅವುಗಳ ಜಾತಕ ಸಾಮಗ್ರಿ ಕಲೆ ಹಾಕಿದೆ. ಸುರುವಿಗೆ ತೊಡಗಿದ್ದು ಕುತೂಹಲದಿಂದ. ಅವುಗಳ ಬಗ್ಗೆ ಬರೆದರೆ ಹೇಗೆ ಎಂಬ ವಿಚಾರ ಬಂದದ್ದು ಆಮೇಲೆ.

ಸರಿ, ಒಂದೆರಡು ಚಿಕ್ಕ ಲೇಖನಗಳನ್ನು ಬರೆದು ಆಗ ಕಸ್ತೂರಿಯ ಸಂಪಾದಕರಾಗಿದ್ದ ಮಾಧವ ಮಹಿಷಿಯವರಿಗೆ ಕೊಟ್ಟಿದ್ದೆ. ಅವರು ಓದಿ, 'ನೋಡುವಾ' ಎಂದವರು ಮುಂದಿನ ಕಸ್ತೂರಿ ಸಂಚಿಕೆಯಲ್ಲಿ ಒಂದನ್ನು ಪ್ರಕಟಿಸಿಯೂ ಬಿಟ್ಟರು. ಪರಿಣಾಮ ಆಶ್ಚರ್ಯಕರವಾಗಿತ್ತು. ಅಕಸ್ಮಾತ್ತಾಗಿ ಭೆಟ್ಟಿಯಾದ ಪರಿಚಿತರು, ಗೆಳೆಯರು ಆ ಲೇಖನದ ಬಗ್ಗೆಯೇ ಪ್ರಸ್ತಾವಿಸಿದರು. ವಿಶೇಷವೆಂದರೆ ಕವಿಶ್ರೇಷ್ಠ ಬೇಂದ್ರೆಯವರನ್ನು ಯಾವುದಕ್ಕಾಗಿಯೋ ಕಾಣಲು ಹೋಗಿದ್ದೆ. ಅವರೂ ಪದಾರ್ಥ ಚಿಂತಾಮಣಿಯನ್ನೇ ಪ್ರಸ್ತಾವಿಸಿದರು. ಶಾಲಾ ಹುಡುಗನೊಬ್ಬ ಮದುವೆಯ ದಿಬ್ಬಣದೊಡನೆ ಹುಬ್ಬಳ್ಳಿಗೆ ಬಂದವ ಮುದ್ದಾಮಾಗಿ ನನ್ನನ್ನು ಹುಡುಕಿಕೊಂಡು ಬಂದ. ಅದರ ಮೂರನೆಯದೋ, ನಾಲ್ಕನೆಯದೋ ಲೇಖನವನ್ನು ಓದಿದ್ದ ಅವನು ಅದನ್ನು ಬಹಳವಾಗಿ ಮೆಚ್ಚಿಕೊಂಡಿದ್ದನಂತೆ. ಅನೇಕ ವಿದ್ವಾನ್ ಸಾಹಿತಿಗಳೂ 'ಪದಾರ್ಥ ಚಿಂತಾಮಣಿ'ಯಿಂದ ನನ್ನನ್ನು ಗುರುತಿಸತೊಡಗಿದರು. ಲಾಂಗೂಲಾಚಾರ್ಯನಾಗಿ ಕಾಲು ಶತಮಾನದಿಂದ ಗುರುತಿಸಲ್ಪಡುತ್ತಿದ್ದವನನ್ನು ಈ 'ಚಿಂತಾಮಣಿ' ವಿಮೋಚನಗೊಳಿಸಿಬಿಟ್ಟಿತು.

ಆಲೋಚಿಸುವವರಿಗೆ ಮಾತ್ರ ಈ ಶಬ್ದಗಳು ತಾತ್ಕಾಲಿಕ ಅರ್ಥವ್ಯಂಜನೆಯನ್ನು ಮೀರಿದ ಸಂಗತಿಗಳನ್ನು ಉದ್ಬೋಧಿಸಬಲ್ಲವು. ಅತಿ ಸಾಮಾನ್ಯ ಶಬ್ದಗಳು ಕೂಡ ತಮ್ಮ ಚರಿತ್ರೆಯ ಬಗ್ಗೆ, ಸಂಸ್ಕೃತಿಯ ಬಗ್ಗೆ ನಮಗೇ ಆಶ್ಚರ್ಯವೆನಿಸುವಂತ ತಥ್ಯಗಳನ್ನು ತೆರೆದಿರಿಸುತ್ತವೆ."

- ಪಾ.ವೆಂ.

'ಕಸ್ತೂರಿಯಲ್ಲಿ ಆಚಾರ್ಯರು ಮೊದಲಿಗೆ ಪರಿಚಯಿಸಿದ ಒಂದು ಅಂಕಣವೆಂದರೆ 'ನಿಮ್ಮ ಶಬ್ದ ಭಾಂಡಾರ ಬೆಳೆಯಲಿ'. ಪ್ರತಿ ತಿಂಗಳೂ ಈ ಅಂಕಣದಲ್ಲಿ ಹತ್ತು ಹನ್ನೆರಡು ಶಬ್ದಗಳನ್ನು ಕೊಟ್ಟು ಪ್ರತಿಯೊಂದಕ್ಕೂ ನಾಲ್ಕು ನಾಲ್ಕು ಅರ್ಥಗಳನ್ನು ಕೊಡಲಾಗುತ್ತಿತ್ತು. ಮುಂದಿನ ಪುಟದಲ್ಲಿ ಸರಿಯಾದ ಅರ್ಥ ಇರುತ್ತಿತ್ತು. ಓದುಗರಿಗೆ ತಮ್ಮ ಶಬ್ದಶಕ್ತಿಯನ್ನು ಅಳೆದುಕೊಳ್ಳಲು ಇದೊಂದು ಒಳ್ಳೆಯ ಮಾರ್ಗ. ಉತ್ತರಗಳಲ್ಲಿ ಆ ಶಬ್ದಕ್ಕೆ ಸಂಬಂಧಿಸಿದ ಬೇರೆ ವಿವರಗಳೂ ಇರುತ್ತವೆ.

ಕಸ್ತೂರಿಯಲ್ಲಿ ಬರೆಯುತ್ತಿದ್ದ ಇನ್ನೊಂದು ಪುಟ್ಟ ಅಂಕಣವೇ 'ಪದಾರ್ಥ ಚಿಂತಾಮಣಿ'. ಹೆಸರೇ ಹೇಳುವಂತೆ ಅದು ಪದ ಮತ್ತು ಅರ್ಥಗಳನ್ನು ಕುರಿತ ಜಿಜ್ಞಾಸೆ. ಇದು ಕನ್ನಡ 'ವರ್ಡ್‌ಲೋರ್'ಗೆ (ಪದ ಪರಂಪರೆಗೆ) ಸಂಬಂಧಿಸಿದ ಮೊತ್ತ ಮೊದಲಿನ ವಿವೇಚನೆ.

ಪ್ರತಿಯೊಂದು ಪದಕ್ಕೂ ಅದರದೇ ಆದ ಚರಿತ್ರೆಯುಂಟು, ಐತಿಹ್ಯವುಂಟು, ಕಥೆಯುಂಟು. ಈ ಲೇಖಕರ ದೃಷ್ಟಿ ಚರಿತ್ರೆಯ ನಿರೂಪಣೆಯಲ್ಲ; ಸ್ವಾರಸ್ಯ ಕಥನ. ಆದರೆ ಇಲ್ಲಿ ನಂಬಲರ್ಹವಾದ ವಿವೇಚನೆಯಿದೆ; ಸಾಧಾರಣವಾದ ಮಾಹಿತಿ ಇದೆ. ಪದಪ್ರಪಂಚ ತುಂಬ ಸ್ವಾರಸ್ಯಪೂರ್ಣವಾಗಿದ್ದರೂ ಜಟಿಲವಾದದ್ದು. ಎಂದರೆ ಪ್ರತಿ ಶಬ್ದಕ್ಕೂ ಕಾರಣ ಹೇಳಲಾಗುವುದಿಲ್ಲ; ವಿವರಣೆ ಕೊಡಲಾಗುವುದಿಲ್ಲ. ಪದ ಮತ್ತು ಅರ್ಥ ಇವು ಬೆಳೆಯುತ್ತವೆ; ಬದಲಾಗುತ್ತವೆ. ಆಗ ತಾರ್ಕಿಕವಾಗಿ ಉತ್ತರ ಸಾಧ್ಯವಿಲ್ಲದಾಗ ಕಲ್ಪನೆ ಗರಿಗೆದರಬಹುದು. ಇಲ್ಲಿ ಹಾಗಾಗಿದೆ."

**- ಹಾ. ಮಾ. ನಾಯಕ.**

'ಶಬ್ದಗಳ ಸಾಂಸ್ಕೃತಿಕ ಒಳನೋಟಗಳು ಎರಡು ರೀತಿಯವು. ಒಂದು, ಹಿಂದಿನವರ ಸಂಸ್ಕೃತಿ, ಚಿಂತನ ಕ್ರಮ ಮತ್ತು ಜೀವನ ಕ್ರಮಗಳನ್ನು ಅರಿಯುವುದು. ಎರಡು, ಸಮಾನಾರ್ಥ ಶಬ್ದಗಳೆಂದು ತಿಳಿಯಲ್ಪಡುವ ಬೇರೆ ಬೇರೆ ಭಾಷೆಗಳ ಶಬ್ದಗಳ ವ್ಯತ್ಯಾಸಗಳನ್ನು ಗಮನಿಸುತ್ತ ಸಾಂಸ್ಕೃತಿಕ ವ್ಯತ್ಯಾಸಗಳನ್ನು ತೋರಿಸಿಕೊಡುವುದು."

**- ಬಿ. ಜನಾರ್ದನ ಭಟ್ಟ.**

ಎರಡನೆಯ ರೀತಿಯ ಒಳನೋಟಕ್ಕೆ ಅವರು ಪದಾರ್ಥ ಚಿಂತಾಮಣಿಯಲ್ಲಿ ಕೊಟ್ಟ ಉದಾಹರಣೆ ಇಂತಿದೆ:

'ಸ್ವಲ್ಪ ಸ್ವಿಚ್ ಆರಿಸಿರಿ- ಎಂದು ನನ್ನವಳು ಬೇರೇನೋ ಮಾಡುತ್ತಿದ್ದವಳು ಹೇಳಿದಳು. ಹಾಗೆ ಮಾಡಿದ ಮೇಲೆ ಈ 'ಸ್ವಲ್ಪ'ದ ಬಗ್ಗೆ ನನಗೆ ಯೋಚನೆ ಹಿಡಿಯಿತು. ಸ್ವಲ್ಪ ಅವರನ್ನು ಕರೀರಿ; ಒಂತುಸಾ ಬಾಯಿ ಮುಚ್ಚಿಕೊಳ್ಳೀರಾ; ಒಂಚೂರು ಇತ್ಲಾಗ ಬನ್ನಿ- ಇತ್ಯಾದಿ ವಾಕ್ಯಗಳಲ್ಲಿ ಸ್ವಲ್ಪ, ತುಸು, ಒಂಚೂರು, ಒಂದಿಷ್ಟು - ಇವು 'ಅಲ್ಪ'ವನ್ನು ಸೂಚಿಸುತ್ತವೆಯೆ? ಹಿಂದೀ-ಉರ್ದುಗಳಲ್ಲಿ ಕೂಡಾ, 'ಜರಾ' ಎಂಬ ಅವ್ಯಯಕ್ಕೆ ಹೀಗೆ ಪ್ರಯೋಗವಿದೆ.

ತುಸು ವಿಚಾರಿಸಿದ ಮೇಲೆ ಈ ಪದವು ಇಂಗ್ಲೀಷಿನ Please (ದಯವಿಟ್ಟು) ಎಂಬರ್ಥದಲ್ಲಿ ನಿಲ್ಲುವುದು, ಎಂದು ಹೊಳೆಯಿತು. ಹೆಂಡತಿ ಗಂಡನಿಗೆ 'ದಯವಿಟ್ಟು' ಎನ್ನುವುದು ಅತಿ ವಿನಯ ಮತ್ತು ವ್ಯಂಗ್ಯವನ್ನು ಸೂಚಿಸಿದಂತಾಗುತ್ತದೆ..... ಇಂಗ್ಲೀಷಿನಲ್ಲಿ ಎಲ್ಲದಕ್ಕೂ Please ಬಳಸಿ ಸವಕಲಾಗಿದೆ. ಆದ್ದರಿಂದ ಭಾರತೀಯನಾಗಿ ನಾನು 'ಸ್ವಲ್ಪ'ದ ನವಿರನ್ನು ಮೆಚ್ಚುತ್ತೇನೆ.

"ತಮ್ಮ ಗ್ರಂಥ ಕೈಸೇರಿತು. ಓದಿ ಆನಂದಿಸುತ್ತಿರುವೆ. ಪ್ರತಿ ಪದದ ಅರ್ಥವಿಚಾರ ಲಹರಿಯು ಸೃಜನಾತ್ಮಕವಾಗಿ, ಇತಿಹಾಸ, ಕಲೆ, ಪರಂಪರೆ, ಹಾಸ್ಯಪ್ರಜ್ಞೆ, ಸಾಂದರ್ಭಿಕ ಔಚಿತ್ಯಯುಕ್ತ ಬೆಳವಣಿಗೆ, ನಾನಾ ಭಾಷಾ ತುಲನೆಗಳ ರಸಾಯನ ಮಾಡಿ, ಹೆಚ್ಚು ಕಮ್ಮಿ ಪುಟ್ಟ ಪ್ರಬಂಧಗಳಂತಿವೆ. ನಾನಾ ಸಂಸ್ಕೃತಿಗಳ ಪದರಗಳ ವಿಶ್ಲೇಷಣೆ ಎಲ್ಲೆಲ್ಲೂ ಕಾಣುತ್ತದೆ. ಅಭಿಪ್ರಾಯ ಭೇದ ಇರುವಲ್ಲಿ ಸೌಜನ್ಯದಿಂದಲೂ ಎಚ್ಚರಿಕೆಯಿಂದಲೂ ವಿವರಿಸುವ ತಮ್ಮ ಕೌಶಲವನ್ನು ತುಂಬಾ ಮೆಚ್ಚಿಕೊಂಡಿರುವೆ."

**- ಪ್ರೊ. ಕೆ. ಎಸ್. ನಾರಾಯಣಾಚಾರ್ಯರ ಪತ್ರದಿಂದ.**

"ಭಾಷೆಯ ಪ್ರತಿಯೊಂದು ಶಬ್ದಕ್ಕೂ ಅದರದೇ ಆದ ಒಂದು ಕಥೆ, ಒಂದು ಚರಿತ್ರೆ ಇರುತ್ತದೆ. ಲಕ್ಷ್ಮೀದೇವಿ ಚಂಚಲೆ ಎನ್ನುವುದುಂಟು. ಆದರೆ ನುಡಿವೆಣ್ಣು (ಶಬ್ದ) ಏನೂ ಕಡಮೆಯಲ್ಲ! ಅವಳೂ ನಿಂತಲ್ಲಿ ನಿಲ್ಲದೆ ಸಂಚರಿಸುತ್ತಾಳೆ. ತೌರುಮನೆ ಬಿಟ್ಟು ಅತ್ತೆಯ ಮನೆಗೆ ಬರುತ್ತಾಳೆ (ತದ್ಭವವಾಗಿ), ರೂಪ, ಬಣ್ಣ, ವೇಷ ಬದಲಾಯಿಸುತ್ತಾಳೆ! ಸ್ವೇಚ್ಛೆಯಾಗಿ ಬೇರೆ ಜನಾಂಗದೊಡನೆ ಬೆರೆಯುತ್ತಾಳೆ. ಹಡಗು ಹತ್ತಿ ದೂರದ ದೇಶಕ್ಕೂ ಹೋಗುತ್ತಾಳೆ. ಮ್ಲೇಂಛರೆಂದೆನಿಸಿಕೊಂಡ ಜನಾಂಗಗಳೊಡನೆ (ಲಜ್ಜೆಯಿಲ್ಲದೆ) ಒಡನಾಡುತ್ತಾಳೆ. ಶಬ್ದಗಳು ಸದಾ ಹರಿಯುವ ನೀರಿನಂತೆ ಎಂದೂ ಹೇಳಬಹುದು.

ಮೊದಲ ನೋಟಕ್ಕೆ ಸಾಮಾನ್ಯವೆಂದು ತೋರುವ ಕೆಲವು ಪದಗಳ ಮೂಲವನ್ನು, ವಿಕಾಸ, ಅರ್ಥಾಂತರಗಳನ್ನು ಹಿಂಜುತ್ತ ಹೋದರೆ ಅನಿರೀಕ್ಷಿತ ಮತ್ತು ಆಶ್ಚರ್ಯಕರ ಸಂಗತಿಗಳು ಬೆಳಕಿಗೆ ಬರುತ್ತವೆ. ಉದಾ.ಗೆ ದೇವ, ಅಸುರ, ವರ್ಷ, ಯಜ್ಞ, ಬುಲಾಕು, ಧ್ಯಾನ, ಬರೆಹ, ಪೂರ್ವ-ಪಶ್ಚಿಮ, ಶುಭ, ವತ್ಸ ಮೊದಲಾದ ಪದಗಳ ಚರಿತ್ರೆಯನ್ನು ವೀಕ್ಷಿಸಿದರೆ ಆಶ್ಚರ್ಯವುಂಟಾಗುತ್ತದೆ. 'ನಮ್ಮ ನೆರೆಯ ನಿಕಟತಮ ಆರ್ಯಬಂಧುಗಳಾದ ಇರಾಣಿಗಳಿಗೆ ದೇವ ಎಂಬ ಶಬ್ದ ಅಸುರ ಶಬ್ದದಂತೆ ದುಷ್ಟ ಪ್ರತೀಕಗಳ ಶಕ್ತಿಯಾಗಿದೆ. ಅಸುರ (ಆಹುರ) ಶಬ್ದವು ತದ್ವಿರುದ್ಧವಾಗಿ ಒಳ್ಳೆ ದಿವ್ಯಶಕ್ತಿಗಳನ್ನು ಪ್ರತಿನಿಧಿಸುತ್ತದೆ. ಹಿಂದೊಂದು ಕಾಲದಲ್ಲಿ ಒಟ್ಟಾಗಿ ಜೀವಿಸುತ್ತಿದ್ದ ಇವೆರಡು ಆರ್ಯಪಂಗಡಗಳಲ್ಲಿ ಯಾವುದೋ ಕಾರಣಕ್ಕಾಗಿ

ಹೋರಾಟವಾಗಿ ಅದು ಧಾರ್ಮಿಕ ಕಲ್ಪನೆಗಳ ವೈಷಮ್ಯವಾಗಿ ರೂಪುಗೊಂಡಿರಬೇಕು. ಧೂಳೆಬ್ಬಿಸುವ ಗೋಗಳ ಹಿಂಡನ್ನು ಕಂಡಿರದ ನಾವು ಈಗೂ ಗೋಧೂಳಿ ಮುಹೂರ್ತವನ್ನು ಬರಮಾಡಿಕೊಂಡಿದ್ದೇವೆ. ಯಜ್ಞದಿಂದ ಯಜಮಾನ ಬಂತು. ಆದರೆ ಯಜ್ಞ ಹೋಯಿತು. ಯಜಮಾನಿಕೆ ಉಳಿಯಿತು'.

ಹೀಗೆ ಸಾಗಿದೆ ಆಚಾರ್ಯರ ವಿಚಾರ ಸರಣಿ."

- ಪ್ರೊ. ಜಿ.ಡಿ. ನಾಡಕರ್ಣಿ.

'ಪಾವೆಂ. ಅವರು ಪದಗಳ ಬೆನ್ನುಹತ್ತಿ ಅವುಗಳ ರೂಪ-ಸ್ವರೂಪಗಳನ್ನು ಪರಿಚಯಿಸುತ್ತ ಪದಲೋಕದ ಮುಕ್ತ ಸಂಚಾರಿಯಾಗಿ ಸಾಗುತ್ತಾರೆ. ಯಾವುದೇ ಪದದ ವಿವೇಚನೆ ನಡೆಸುವಾಗ ಪಾವೆಂ ಅದರ ಮೈಯನ್ನು ಸುತ್ತುಮುತ್ತು ತಿರುಗಿಸಿ, ಹೊರಳಿಸಿ, ಅದರ ರೂಪ, ಲಕ್ಷಣ, ಅರ್ಥ, ಮೌಲ್ಯಗಳನ್ನು ಪರಿಶೀಲಿಸುತ್ತಾರೆ. ಶಬ್ದದ ಮೂಲ ರೂಪವನ್ನು ಶೋಧ ಮಾಡುತ್ತಾರೆ. ಹೀಗೆ ಪದದ ಮೂಲಕ್ಕೆ ಕೈ ಇಕ್ಕುವ ಅರ್ಥಗ್ರಹಿಕೆ ಪಾವೆಂ. ಅವರ ಹಿರಿಯ ಸಾಧನೆಯಾಗಿದೆ.'

- ಶ್ಯಾಮಸುಂದರ ಬಿದರಕುಂದಿ

"ದಕ್ಷಿಣ ಕನ್ನಡ ಪರಿಸರದಲ್ಲಿ ಪದಾರ್ಥ ಎಂದರೆ ತಿನಿಸು ಎಂದು ಭಾವಿಸಿ ಕೆಲವು ಮಹಿಳಾಮಣಿಗಳು, ಹೊಸ ರುಚಿಯ ಆಹಾರ ವಿಷಯ ಇರಬಹುದೆಂದು ಓದಲು ತೊಡಗಿ ನಿರಾಶರಾಗಿದ್ದಾರೆ. ಮುಂದಿನ ಆವೃತ್ತಿಯಲ್ಲಿ ಇದರ ಶೀರ್ಷಿಕೆ ಬದಲಾಗಬೇಕೆಂದು ಪತ್ಯೇತರ ಸಲಹೆ ನೀಡುತ್ತಿದ್ದೇನೆ."

- ವಿಶ್ವಪ್ರೇಮಿ

"ಹಿರಿಯರಾದ ಆಚಾರ್ಯ, ಅವರಿಗೆ - ವಂದನೆಗಳು.

ಪುಸ್ತಕ ನಿನ್ನೆ ಕೈಸೇರಿದೆ. ರಾತ್ರಿ ನಿದ್ದೆ ಕೆಡಿಸಿತೆಂದು ಬರೆಯಲು ಸಂತೋಷವೆನಿಸುತ್ತದೆ.

ಶಬ್ದಗಳ ಸಾಂಸ್ಕೃತಿಕ ಅಧ್ಯಯನಕ್ಕೆ 'ಪದಾರ್ಥ ಚಿಂತಾಮಣಿ' ಒಂದು ಮಾದರಿ. ಇಲ್ಲಿ ಶಬ್ದಗಳ ಗಂಟನ್ನು ಬಿಚ್ಚುವ, ನಂಟನ್ನು ಹುಡುಕುವ ಸಾಹಸವಿದೆ. ಬರವಣಿಗೆಯಲ್ಲಿ ಸರಸ ಶ್ರದ್ಧೆಯಿದೆ. ಹೀಗಾಗಿ ನಿಘಂಟುವಿನ ಹೊಸ ಮಾದರಿಯ ಅಧ್ಯಯನ ಇಲ್ಲಿ ತೆರೆದುಕೊಂಡಿದೆ.

ವಂದನೆಗಳು,

ವಿಶ್ವಾಸದ - ಎಂ. ಎಂ. ಕಲಬುರ್ಗಿ".

# ೧೧ ಜಗತ್ತಿನ ವಿಚಿತ್ರ ಘಟನಾವಳಿ

ವೈವಿಧ್ಯ ಸ್ವರೂಪದ ಕಸ್ತೂರಿ ಮಾಸಿಕದಲ್ಲಿ, ಜಗತ್ತಿನಲ್ಲಿ ಜರುಗಿದ ಅನೇಕ ಆಶ್ಚರ್ಯಕರ ಘಟನೆಗಳನ್ನು ಕೊಡಬೇಕೆಂದು ಪಾವೆಂ. ಆರಂಭದಿಂದಲೂ ಯೋಚಿಸಿದ್ದರು. ಈ ಕಾರಣದಿಂದ ಪ್ರತಿ ಸಂಚಿಕೆಯಲ್ಲಿ ಒದೆರಡಾದರೂ ಅಂಥ ಆಕರ್ಷಕ ಘಟನೆಗಳನ್ನು ಕೊಡುತ್ತಹೋದರು. ಅವುಗಳಲ್ಲಿ ೬೦ಕ್ಕೆ ಮೇಲ್ಪಟ್ಟು ತಮ್ಮ ಕೈಗೆ ಎಟಕಿದವುಗಳನ್ನು ಪ್ರೊ. ಎಸ್.ಎಲ್. ಶ್ರೀನಿವಾಸ ಮೂರ್ತಿಯವರು 'ಚಿತ್ರ-ವಿಚಿತ್ರ ಈ ಜಗತ್ತು' ಎಂಬ ಸಂಗ್ರಹದಲ್ಲಿ ಹಿಡಿದಿಟ್ಟಿದ್ದಾರೆ.

ಘಟನೆಗಳ ವಿಸ್ಮಯ ಅಂತಿರಲಿ, ಅವನ್ನು ಪಾವೆಂ. ಎಲ್ಲೆಲ್ಲಿಂದ, ಹೇಗೆ ದೊರಕಿಸಿದರು ಎಂಬುದು ಇನ್ನಷ್ಟು ವಿಸ್ಮಯವೆನಿಸುತ್ತದೆ. ಇಲ್ಲಿ ಬಂದಿರುವ ಸಂಗತಿಗಳ ಹಿಂದೆ ರಂಜನೆಯ, ಕೌತುಕದ ಅಂಶವೇ ಪ್ರಧಾನವಾಗಿದೆ. ಬಂದದ್ದೆಲ್ಲ ಮಾಹಿತಿ ಪೂರ್ಣವಾಗಿದ್ದು ಪ್ರತಿಯೊಂದು ಘಟನೆಯೂ ವಾಚನ ರಮ್ಯವಾಗಿದೆ.

ಎದ್ದು ಕಾಣುವ ಸಂಗತಿಯೆಂದರೆ ವಿಷಯಗಳ ಅತಿ ವಿಶಾಲವಾದ ಹರಹು. ಸೈಪ್ರಸ್ ನಾಡಿನ ಮದುವೆಯ ಪದ್ಧತಿಗಳ ಬಗ್ಗೆ ಬರೆಯುವಷ್ಟೇ ಸಹಜವಾಗಿ ಮೊಹೆಂಜೊದಾರದ ಸತ್ತವರ ದಿಬ್ಬಗಳ ಕುರಿತು ಬರೆದಿದ್ದಾರೆ. ಗ್ರೀನ್‌ವಿಚ್ ಕಾಲಮಾನ ಪದ್ಧತಿಯಂತಹ ವೈಜ್ಞಾನಿಕ ಸಂಗತಿಗಳು, ಕ್ರೂಗರ್ ಎಂಬವನ ವಂಚಕತನ - ಈ ಬಗೆಗಿನ ಲೇಖನಗಳಷ್ಟೇ ಆಸಕ್ತಿ ಹುಟ್ಟಿಸುವಂತಿವೆ.

ಪಾವೆಂರವರ ಈ ಕೌತುಕದ ಪ್ರಪಂಚದಲ್ಲಿ ನದಿಯ ಮೂಲವನ್ನು ಅರಸುವ ಸಾಹಸಿಗಳಿದ್ದಾರೆ. ಮೆಡಿಕಲ್ ಕಾಲೇಜಿಗೆ ಹೆಣಗಳನ್ನು ಒದಗಿಸುವ ಭಂಡರಿದ್ದಾರೆ. ಜೇಲಿನಲ್ಲಿ ಸಿಲುಕಿದ ಸಮಾಜ ಸುಧಾರಕರ ಜೊತೆಗೇ ಪ್ರೇಮಿಯನ್ನು ಕೊಂದ ಪ್ರಣಯಿಗಳು, ಸುಳ್ಳುನೋಟಿನ ಸರದಾರರು, ವಿಶ್ವಪರ್ಯಟನೆಯನ್ನು ಮಾಡ ಹೊರಟ ಧೀರರು, ಕೊಡುಗೈ ದೊರೆಗಳು - ಇವರೆಲ್ಲರು ಇಲ್ಲಿ ಸ್ಥಾನವನ್ನು ಗಿಟ್ಟಿಸಿದ್ದಾರೆ. ಹಿಮಶಿಖರದ ಜರತ, ಜ್ವಾಲಾಮುಖಿಯ ಮಾರುತಗಳಂತಹ ನೈಸರ್ಗಿಕ ಪ್ರಕೋಪಗಳನ್ನೂ ನಾವಿಲ್ಲಿ ಕಾಣಬಹುದು.

ಈಚೆಗೆ ಚಲನಚಿತ್ರವಾಗಿ ಅಪಾರ ಜನಪ್ರಿಯತೆಯನ್ನೂ ಗಳಿಸಿದ 'ಟೈಟಾನಿಕ್' ಹಡಗಿನ ದುರಂತದ ಬಗ್ಗೆ ೧೯೬೧ರಷ್ಟು ಹಿಂದೆಯೇ ಆಚಾರ್ಯರು ಲೇಖನವನ್ನು ಬರೆದಿರುವುದು ಅವರ 'ವಾರ್ತಾನಾಸಿಕ'ದ ಚುರುಕಿಗೆ ಸಾಕ್ಷಿಯಾಗಿದೆ.

ಘಟನೆಗಳ ಅದ್ಭುತ ಮತ್ತು ವೈಚಿತ್ರ್ಯಗಳನ್ನು ಮನಗಾಣಿಸಲು ಒಂದನ್ನು ಇಲ್ಲಿ ಉಲ್ಲೇಖಿಸುವೆ:

ಅಮೇರಿಕೆಯ ಪರ್ಲ್ ಹಾರ್ಬರನ್ನು ಜಪಾನಿಗರು ಧ್ವಂಸ ಮಾಡಿದ ಸಿಟ್ಟಿನಲ್ಲಿ ಡಾ. ಅಡಾಮ್ಸ್ ಎಂಬಾತ ಒಮ್ಮೆ ಅಕಸ್ಮಾತ್ತಾಗಿ ಸಹಸ್ರಾರು ಬಾವಲಿಗಳ ಗುಂಪನ್ನು ನೋಡಿದ. ಅವುಗಳ ಹಾರಾಟದ ಸಾಮರ್ಥ್ಯವನ್ನು ಕಂಡು ಅವಕ್ಕೆ ಸಿಡಿ ಬಾಂಬುಗಳನ್ನು ಜೋಡಿಸಿ ಟೋಕಿಯೋದ ಮೇಲೆ ಇಳಿಬಿಟ್ಟರೆ, ತುಸುವೇ ಸಮಯದಲ್ಲಿ ಇಡೀ ನಗರವೇ ಬೆಂಕಿಹತ್ತಿ ಉರಿಯಬಹುದು! ನೆನಪಿಡಿ: ಈ ಬಾವಲಿಗಳ ತೂಕ ಒಂದು ಓಂಸು ಮಾತ್ರ. ಅವು ಒಯ್ಯಬಹುದಾಗಿದ್ದ ಸಿಡಿಬಾಂಬ್ ಅಷ್ಟೇ ತೂಕದ್ದಾಗಿರಬೇಕಿತ್ತು.

ಮುಖ್ಯತಃ ಇಂಥ ಬಾವಲಿಗಳು ಲಕ್ಷಗಟ್ಟಲೆ ದೊರೆಯಬೇಕು. ಅವು ತಿನ್ನುವ ಆಹಾರ ಅವುಗಳ ತೂಕದ ಹತ್ತುಪಟ್ಟು! ಅವಕ್ಕೆ ಕಟ್ಟಬೇಕಾದ ಮಿನಿಬಾಂಬುಗಳು ತಯಾರಾಗಬೇಕು. ಏನೆಲ್ಲ ಕೆಲಸ. ಅದಕ್ಕಾಗಿ ಅಧ್ಯಕ್ಷ ರೂಸ್‌ವೆಲ್ಟರ ನೇರ ಅನುಮತಿಯಿಂದ ಈ ತಯಾರಿ ಗುಟ್ಟಿನಿಂದ ನಡೆದಿತ್ತು. ಇನ್ನೀಗ ಮಿಲಿಟರಿಯವರಿಂದ ಕಾರ್ಯ ಕೈಗೂಡಬೇಕಷ್ಟೆ. ಆದರೆ ಅವರ ಒಂದು ತಾಂತ್ರಿಕ ಲೋಪದಿಂದ ಪ್ರಾಯೋಗಿಕವಾಗಿ ಬಾಂಬನ್ನು ಕಟ್ಟಿಕೊಂಡ ಬಾವಲಿಗಳು ಅಮೆರಿಕೆಯದೇ ಒಂದು ಊರನ್ನು ಧ್ವಂಸಗೊಳಿಸುವಂತಾಯಿತು! ಯೋಜನೆ ಬಿದ್ದುಹೋಯಿತು.

ಇಂಥ ಅನೇಕಾನೇಕ ವೈವಿಧ್ಯಮಯವಾದ ಘಟನೆಗಳನ್ನು ಪಾವೆಂ ಓದುಗರಿಗೆ ಕೊಡಮಾಡಿದ್ದಾರೆ.



## ಸಮಾರೋಪ

('ಪದಾರ್ಥ ಚಿಂತಾಮಣಿ'ಗೆ ಬನ್ನಂಜೆ ಗೋವಿಂದಾಚಾರ್ಯರು ಬರೆದ 'ಹೀಗೊಂದು ಮುನ್ನುಡಿ'ಯಿಂದ)

"ಕಪಿಗಳು ಕಡಲನ್ನೇನೋ ದಾಟಿದರು. ಅದರ ಆಳ ಅವರಿಗೇನು ಗೊತ್ತು? ಪಾತಾಳದಾಳಕ್ಕಿಳಿದು ಕಡಲನ್ನು ಕಡೆದ ಮಂದರಗಿರಿಗೆ ಮಾತ್ರವೇ ಅದರ ಆಳ ಗೊತ್ತು- ಬಹಳ ಮಂದಿ ಕವಿಗಳೂ ಹಾಗೆಯೆ: ಅವರು ಸಾಹಿತ್ಯದ ಕಡಲನ್ನು ದಾಟಿರಬಹುದು; ದಾಟಿ ಆಚೆಯ ತಡಿ ಕಂಡಿರಬಹುದು. ಕಡಲ ಆಳವನ್ನರಿತ ಕವಿ ತಾನೊಬ್ಬನೆ, ಎನ್ನುತ್ತಾನೆ - ಸಂಸ್ಕೃತ ಕವಿ ಮುರಾರಿ. ಅರ್ಥಾತ್ ಸಾಮಾನ್ಯರದೊಂದು ದಾರಿ. ಸಾಮಾನ್ಯ ಪಂಡಿತರದೊಂದು ದಾರಿ. ಮುರಾರಿಯದು ಮೂರನೆಯ ದಾರಿ.

ಮುರಾರಿಯ ಮಾತು ಮುರಾರಿಗೆ ಅನ್ವಯವಾದೀತು; ಆಗದೆಯೂ ಹೋದೀತು. ಪಾವೆಂ. ಅವರಿಗಂತು ಖಂಡಿತವಾಗಿ ಅನ್ವಯವಾಗುತ್ತದೆ. ಉಳಿದವರು ನಡೆದು ಸವೆಸಿದ ದಾರಿಯಲ್ಲಿ ಅವರು ನಡೆದವರೇ ಅಲ್ಲ. ಅವರದ್ದೂ "ತೃತೀಯಃ ಪಂಥಾಃ" ಮೂರನೆಯ ದಾರಿ, ಹೌದು.

ಅವರು ಬದುಕಿನ ಕೊನೆಯ ಕ್ಷಣದ ತನಕವೂ ಹೊಸ ಹಾದಿಯನ್ನರಸುತ್ತ ನಡೆದರು. ಹೊಸತನ್ನು ಹುಡುಕಿದರು. ಹೊಸತನ್ನು ಕೊಟ್ಟರು. ಯಾರೂ ಸಾಧಿಸದ್ದನ್ನು ಸಾಧಿಸುವುದು ಅವರ ಅಭಿಜಾತ ಗುಣವಾಗಿತ್ತು. ಈ 'ಪದಾರ್ಥ ಚಿಂತಾಮಣಿ' ಅದಕ್ಕೊಂದು ಅಪೂರ್ವ ನಿದರ್ಶನ.

ತಲಸ್ಪರ್ಶಿಯಾದ ಚಿಂತನೆ, ಸೂಕ್ಷ್ಮಾತಿಸೂಕ್ಷ್ಮವನ್ನು ಗ್ರಹಿಸಬಲ್ಲ ದುರ್ಬೀನು ದೃಷ್ಟಿ, ನಿಶಿತವಾದ ತಾರ್ಕಿಕ ಪ್ರಜ್ಞೆ ಮತ್ತು ಕರಾರುವಾಕ್ಕಾದ ನಿರೂಪಣೆ, ಇವು ಪಾವೆಂ. ಅವರ ವೈದುಷ್ಯದ ಮೂಲ ದ್ರವ್ಯಗಳು. ಅವರ ಬರವಣಿಗೆಯುದ್ದಕ್ಕೂ ಈ ವೈಶಿಷ್ಟ್ಯವನ್ನು ನಾವು ಗುರುತಿಸಬಹುದು.

ಅವರು ಲಾಂಗೂಲಾಚಾರ್ಯರಾಗಿ ಲಘುಪ್ರಬಂಧಗಳನ್ನು ಬರೆದಾಗಲೂ ಈ ಮೂಲದ್ರವ್ಯಗಳನ್ನು ಉಳಿಸಿಕೊಂಡೇ ಬರೆದವರು.
ಆ ಪ್ರಬಂಧಗಳ ಚೌಕಟ್ಟು ಲಘುವಾದರೂ ಕಟ್ಟು ಲಘುವಲ್ಲ. ಅವರು ಲಘುವಾಗಿ ಲಾಂಗೂಲ ಆಡಿಸುತ್ತಲೆ ವಿಷಯವನ್ನು ಸಮಗ್ರವಾಗಿ ಜಾಲಾಡಿಸಿ ಬಿಡುತ್ತಾರೆ. ನಗುನಗುತ್ತಲೇ ನಮ್ಮನ್ನು ಗಂಭೀರ ಚಿಂತನೆಗೆ ಒಳಪಡಿಸಿ ಬಿಡುತ್ತಾರೆ. ವಿಷಾದಕ್ಕೂ ನಗೆಯ ಲೇಪ.

ಪಾವೆಂ. ಆಚಾರ್ಯರಿಂದ 'ಪದಾರ್ಥ ಚಿಂತಾಮಣಿ'ಯ ಸರಮಾಲೆ ನಿರಂತರವಾಗಿ ಬರಬೇಕಿತ್ತು. ಕನ್ನಡ ವಾಗ್ದೇವಿಯ ಕೊರಳಿಗೆ ಅದು ಅಪೂರ್ವ ಸರಮಾಲೆಯಾಗುತ್ತಿತ್ತು. ಈ ಕೊರತೆಯನ್ನು ತುಂಬುವವರು ಯಾರು? ಈಗ ಮಣಿಯಿರದ ಬರಿಯ ಚಿಂತೆ ನಮ್ಮದು.'



## 'ನಾಡಿಗೆ ನಮಸ್ಕಾರ' ಸಾಹಿತ್ಯ ಸಂಸ್ಕೃತಿ ಚಿಂತನ ಗ್ರಂಥಮಾಲೆ

### ಮಹಾಪೋಷಕರು

೧. ರಾಜರ್ಷಿ ಡಾ|| ಡಿ. ವೀರೇಂದ್ರ ಹೆಗ್ಗಡೆಯವರು, ಶ್ರೀಕ್ಷೇತ್ರ ಧರ್ಮಸ್ಥಳ
೨. ಧರ್ಮದರ್ಶಿ ಶ್ರೀ ಹರಿಕೃಷ್ಣ ಪುನರೂರು, 'ಶುಭವಾಗಲಿ', ಮುಲ್ಕಿ
೩. ಶ್ರೀ ಸದಾನಂದ ಸುವರ್ಣ, 'ಸುವರ್ಣಗಿರಿ', ಅಬ್ಬಕ್ಕ ನಗರ, ಮಂಗಳೂರು
೪. ಡಾ. ಯು. ಪಿ. ಉಪಾಧ್ಯಾಯ, ಮಜೂರು, ಕಾಪು.
೫. ಶ್ರೀ ಸಿ. ಕೆ. ಪಡಿವಾಳ್, ಪಡಿವಾಳ್ ರೆಸ್ಟೋರೆಂಟ್, ಮೂಡಬಿದಿರೆ.
೬. ಡಾ|| ಎಚ್. ಶಾಂತಾರಾಮ್, ಆಡಳಿತಾಧಿಕಾರಿಯವರು, ಅಕಾಡೆಮಿ ಆಫ್ ಜನರಲ್ ಎಜ್ಯುಕೇಶನ್, ಅನಂತನಗರ, ಮಣಿಪಾಲ
೭. ಶ್ರೀ ಆನಂದಕೃಷ್ಣ, ಚೌಟ ಪ್ರತಿಷ್ಠಾನ (ರಿ.), ಬೆಂಗಳೂರು
೮. ಶ್ರೀ ಎಂ. ಕೆ. ರವೀಂದ್ರಕುಮಾರ್, ಎಡ್ವೊಕೇಟ್, ಬೆಂಗಳೂರು
೯. ಶ್ರೀ ಕಿರಣ. ಎನ್. ಬಿ. ( ಬೋಳಂತ ಕೋಡಿ) ಕರಂಗಲಪಾಡಿ, ಮಂಗಳೂರು
೧೦. ಶ್ರೀ ಕೆ. ಶ್ಯಾಮಸುಂದರ್, ಇಂಡಸ್ಟ್ರಿಯಲಿಸ್ಟ್, ವಿಜಯನಗರ, ಬೆಂಗಳೂರು
೧೧. ಡಾ|| ಪಳ್ಳತಡ್ಕ ಕೇಶವ ಭಟ್ಟ, ಚರ್ಚ್ ರೋಡು, ಮಣಿಪಾಲ
೧೨. ಶ್ರೀ ಜಿ. ರಾಮಕೃಷ್ಣ ಆಚಾರ್, ಎಸ್.ಕೆ. ಎಫ್. ಎಜ್ಯುಕೇಶನ್ ಫೌಂಡೇಶನ್, ಮೂಡಬಿದ್ರೆ
೧೩. ಶ್ರೀಮತಿ ಆನಂದಿ ಸದಾಶಿವ ರಾವ್, ಹಿರಿಯ ಲೇಖಕಿ, ಮಂಗಳೂರು.
೧೪. 'ನವಯುಗ'ದ ಹೊನ್ನಯ ಶೆಟ್ಟಿ ಸ್ಮಾರಕ ಟ್ರಸ್ಟ್, C/o ಶ್ರೀಮತಿ ಉಷಾ ಪಿ. ರೈ, ಹಿರಿಯ ಲೇಖಕಿ, ಬೆಂಗಳೂರು.
೧೫. ಶ್ರೀ ಪಳಕಳ ರಘುಪತಿ ಭಟ್ ಮತ್ತು ಸಹೋದರರು, ಮೂಡಬಿದಿರೆ.
೧೬. ಶ್ರೀ ಎ. ವಿ. ನರಸಿಂಹಮೂರ್ತಿ, ಉದ್ದೀಮುಕ್ಕಿ, ಕಳಸ
೧೭. ಶ್ರೀ ಸುದರ್ಶನ ಎನ್. ಮೊಗಸಾಲೆ, ಡೈರೆಕ್ಟರ್, ಜಿಯೋಮೆಟ್ರಿಕ್ ಸಾಫ್ಟ್‌ವೇರ್, ಸೊಲ್ಯೂಷನ್ಸ್ ಲಿಮಿಟೆಡ್, ಪುಣೆ.
೧೮. ಶ್ರೀ ಎ. ಮಾಧವ ಉಡುಪ, 'ಕೃಷ್ಣ ಕುಟೀರ', ಸಾಲಿಗ್ರಾಮ, ಉಡುಪಿ ಜಿಲ್ಲೆ.

## ಪೋಷಕರು

೧. ಅಕಾಡಮಿ ಆಫ್ ಜನರಲ್ ಎಜ್ಯುಕೇಶನ್, ಮಣಿಪಾಲ
೨. ಶ್ರೀ ಜಿ. ಭೀಮೇಶ್ವರ ಜೋಶಿ, ಧರ್ಮಕರ್ತರು, ಶ್ರೀ ಆದಿಶಕ್ತ್ಯಾತ್ಮಕ ಅನ್ನಪೂರ್ಣೇಶ್ವರಿ ದೇವಸ್ಥಾನ, ಹೊರನಾಡು, ಚಿಕ್ಕಮಗಳೂರು.
೩. ಶ್ರೀ ಕೆ. ಗೋವಿಂದದಾಸ್, 'ಗೋವಿಂದ ಭವನ', ಸುರತ್ಕಲ್, ದ.ಕ.
೪. ಶ್ರೀ ಶಾಂತಾರಾಮ ಚಿಪಳೂಣಕರ್, ನಿವೃತ್ತ ತಹಶೀಲ್ದಾರರು, ಮಾಳ.
೫. ಡಾ. ಕೆ. ತಿಮ್ಮಪ್ಪ ರೈ, ಕೆದಂಬಾಡಿ ಮೆಡಿಕಲ್ ಡಿಸ್ಪೆನ್ಸರಿ, ವಿಟ್ಲ.
೬. ಶ್ರೀ ಕೆ. ಸಿ. ವಿರೂಪಾಕ್ಷ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಮಂಗಳೂರು.
೭. ಶ್ರೀಮತಿ ಸಂಧ್ಯಾ, ವಸಂತಕುಮಾರ ರಾವ್ 'ಸುಜಿತ್ ಫಾರ್ಮ್ಸ್',ಕೈಕಂಬ
೮. ಶ್ರೀ ಜನಾರ್ದನ ಗುರ್ಕಾರ್, ಹಿರಿಯ ಸಾಹಿತಿ, ಮೈಸೂರು.
೯. ಕಾಂತಾವರ ಮಂಚದ ಬೈಲು, ಕೆ. ಕೆ. ರಾಮಚಂದ್ರರಾವ್ ಸ್ಮಾರಕ ಟ್ರಸ್ಟ್, ಮುಂಡ್ಕ
೧೦. ಕಾಂತಾವರ 'ಕೃಷ್ಣ ಕೃಪಾ', ಶ್ರೀಮತಿ ಮತ್ತು ಶ್ರೀ ಅಚ್ಚಣ್ಣ ಶೆಟ್ಟಿ, ಸ್ಮಾರಕ ಟ್ರಸ್ಟ್
೧೧. ಶ್ರೀಮತಿ ಸಬಿತ - 'ಯಕ್ಷಾನುಗ್ರಹ', ಪಡೀಲ್, ಮಂಗಳೂರು
೧೨. ಶ್ರೀ ಸಿ.ಎ. ಶೆಟ್ಟಿ, ಹೋಟೇಲ್ ಅರವಿಂದ್, ಸಾಂತಾಕ್ರೂಜ್, ಮುಂಬೈ
೧೩. ಡಾ. ವೀಣಾ ಆನಂದ್, ಟೆಕ್ಸಾಸ್ ಯು.ಎಸ್.ಎ.
೧೪. ಡಾ. ವೀಣಾ ಎಸ್. ಇಸಳೂರ, ಸಹ್ಯಾದ್ರಿ ಆಸ್ಪತ್ರೆ, ಶಿವಮೊಗ್ಗ
೧೫. ಶ್ರೀ ಕೃಷ್ಣಮೂರ್ತಿ ಉಪಾಧ್ಯ, ಬೆಂಗಳೂರು

## ಪ್ರೋತ್ಸಾಹಕರು

೧. ಶ್ರೀ ಶ್ರೀಪತಿ ಭಟ್, ಧನಲಕ್ಷ್ಮೀ ಕ್ಯಾಶ್ಯೂ ಎಕ್ಸ್‌ಪೋರ್ಟ್, ಮೂಡಬಿದಿರೆ.
೨. ಶ್ರೀ ಪದ್ಮರಾಜ ಹೆಗ್ಡೆ, ಉಳಿರೋಡಿ ಮನೆ, ಕಾಂತಾವರ.
೩. ಶ್ರೀ ಶ್ರೀಪತಿ ಮಂಜನಬೈಲ್, ಪ್ರಸಿದ್ಧ ರಂಗಕರ್ಮಿ, ಬೆಳಗಾಂ.
೪. ಪಾವೆಂ ವಿಶ್ವಸ್ಥ ಸಮಿತಿ, ಹುಬ್ಬಳ್ಳಿ

# ನಾಡಿಗೆ ನಮಸ್ಕಾರ

## ಮೊದಲ ಕಂತಿನ ಹತ್ತು ಕೃತಿಗಳು

ಕುಸುಮ ೧. ಪದ್ಮಭೂಷಣ ಡಾ| ವೀರೇಂದ್ರ ಹೆಗ್ಗಡೆಯವರು
ಲೇಖಕರು : ಡಾ. ಬಿ. ಪಿ. ಸಂಪತ್‌ಕುಮಾರ್, ಉಜಿರೆ

ಕುಸುಮ ೨. ವಿದ್ಯಾವಾಚಸ್ಪತಿ ಬನ್ನಂಜೆ ಗೋವಿಂದಾಚಾರ್ಯ
ಲೇಖಕರು: ಬೆಳಗೋಡು ರಮೇಶ ಭಟ್

ಕುಸುಮ ೩. ಸಂಶೋಧಕ ಮಹೋಪಾಧ್ಯಾಯ ಡಾ| ಉಳಿಯಾರು ಪದ್ಮನಾಭ ಉಪಾಧ್ಯಾಯ
ಲೇಖಕರು : ಎಸ್. ಆರ್. ಅರುಣಕುಮಾರ್

ಕುಸುಮ ೪. ಹಿರಿಯ ಸಾಹಿತಿ ಜನಾರ್ದನ ಗುರ್ಕಾರ್
ಲೇಖಕರು : ಡಾ. ಬಿ. ಜನಾರ್ದನ ಭಟ್

ಕುಸುಮ ೫. ಮಹಾಕವಿ ಮಂದಾರ ಕೇಶವ ಭಟ್ಟ
ಲೇಖಕಿ : ಡಾ. ನಿಕೇತನ

ಕುಸುಮ ೬. ಮೃಗಯಾ ಸಾಹಿತಿ ಕೆದಂಬಾಡಿ ಜತ್ತಪ್ಪ ರೈ
ಲೇಖಕರು : ವಿ. ಗ. ನಾಯಕ

ಕುಸುಮ ೭. ಅಭಿನವ ಧನ್ವಂತರಿ ಡಾ| ಮಳಿಯೆ ಗೋಪಾಲಕೃಷ್ಣರಾಯರು
ಲೇಖಕರು : ಜನಾರ್ದನ ಗುರ್ಕಾರ್

ಕುಸುಮ ೮. ರಂಗಕರ್ಮಿ ಸದಾನಂದ ಸುವರ್ಣ
ಲೇಖಕಿ : ಡಾ| ಸೀತಾಲಕ್ಷ್ಮಿ ಕರ್ಕಿಕೋಡಿ

ಕುಸುಮ ೯. ಸಸ್ಯವಿಜ್ಞಾನಿ ಡಾ|| ಪಳ್ಳತ್ತಡ್ಕ ಕೇಶವ ಭಟ್ಟ
ಲೇಖಕರು : ಡಾ. ವಸಂತಕುಮಾರ ಪೆರ್ಲ

ಕುಸುಮ ೧೦. ಕರ್ನಾಟಕದ ಹಾನಿಮನ್ ಡಾ| ಕೆ. ವಸಂತಕುಮಾರ ರಾವ್, ಕೈಕಂಬ
ಲೇಖಕರು : ಡಾ. ಬಿಶ್ವೇಶ್ವರ ಪಿ.ಕೆ.

# ನಾಡಿಗೆ ನಮಸ್ಕಾರ

## ಎರಡನೇ ಕಂತಿನ ಹತ್ತು ಕೃತಿಗಳು

ಕುಸುಮ ೧೧. ಸಮಾಜ ಸೇವೆಗೆ ಪರ್ಯಾಯ ಹೆಸರು : ಧರ್ಮದರ್ಶಿ ಹರಿಕೃಷ್ಣ ಪುನರೂರು
ಲೇಖಕರು : ಜಯರಾಮ ಕಾರಂತ, ಕಾಂತಾವರ

ಕುಸುಮ ೧೨. ಪತ್ರಕರ್ತರ ಆಚಾರ್ಯ : ಪಾಡಿಗಾರು ವೆಂಕಟ್ರಮಣ ಆಚಾರ್ಯ
ಲೇಖಕರು : ಡಾ. ಶ್ರೀನಿವಾಸ ಹಾವನೂರ

ಕುಸುಮ ೧೩. ಹಿರಿಯ ಜಾನಪದ ವಿದ್ವಾಂಸ : ಡಾ| ಅಮೃತ ಸೋಮೇಶ್ವರ
ಲೇಖಕರು: ಡಾ. ನಾ. ದಾಮೋದರ ಶೆಟ್ಟಿ

ಕುಸುಮ ೧೪. ತುಳು ಭಾಷಾ ಸಾಹಿತ್ಯದ ರನ್ನ : ದರ್ಬೆ ಕೃಷ್ಣಾನಂದ ಚೌಟ
ಲೇಖಕರು : ಡಾ. ವಾಮನ ನಂದಾವರ

ಕುಸುಮ ೧೫. ನೈತಿಕ ಶಿಕ್ಷಣದ ಚಿಂತಕ : ಉ. ಕ. ಸುಬ್ಬರಾಯಾಚಾರ್ಯ
ಲೇಖಕರು : ಬೈಕಾಡಿ ಜನಾರ್ದನ ಆಚಾರ್

ಕುಸುಮ ೧೬. ಪುಸ್ತಕ ಪ್ರೀತಿಗೆ ರೂಪಕ : ಬೋಳಂತಕೋಡಿ ಈಶ್ವರ ಭಟ್ಟ
ಲೇಖಕ : ಪ್ರೊ. ವಿ. ಬಿ. ಅರ್ತಿಕಜೆ

ಕುಸುಮ ೧೭. ಮಿಂಚುವ ಮಾತಿನ ಯಕ್ಷ : ಕುಂಬಳೆ ಸುಂದರ ರಾವ್
ಲೇಖಕ : ಗಣರಾಜ ಕುಂಬ್ಳೆ

ಕುಸುಮ ೧೮. ಒಂದಾಣೆ ಮಾಲೆಯ ಸಾಹಸಿ : ಕುಡ್ಪಿ ವಾಸುದೇವ ಶೆಣೈ
ಲೇಖಕಿ : ಡಾ. ಸಬಿಹಾ ಭೂಮಿಗೌಡ

ಕುಸುಮ ೧೯. ಮಕ್ಕಳ ಸಾಹಿತ್ಯದ ಹಿರಿಯ : ಪಳಕಳ ಸೀತಾರಾಮ ಭಟ್ಟ
ಲೇಖಕ : ನೆಂಪು ಸೀತಾರಾಮ ಭಟ್ಟ

ಕುಸುಮ ೨೦. ಬಹುಮುಖ ಪ್ರತಿಭಾ ಸಂಪನ್ನ : ಡಾ. ಎಂ. ಮೋಹನ ಆಳ್ವ
ಲೇಖಕ : ಡಾ. ನರೇಂದ್ರ ರೈ ದೇರ್ಲ

# ಕಾಂತಾವರ ಕನ್ನಡ ಸಂಘದ ಮಾದರಿ*

ಕರ್ನಾಟಕದ ಮಟ್ಟಿಗೆ ಇದು ಪರ್ವಕಾಲ. ಕನ್ನಡ ನಾಡು ಉದಯವಾಗಿ ಈಗ 50 ವರ್ಷ ಕಳೆದಿದ್ದರೂ 'ಸುವರ್ಣ ವರ್ಷಾಚರಣೆ' ಈಗ ಚಾಲ್ತಿಯಲ್ಲಿ ಇದೆ. ಈ ಸವಿನೆನಪನ್ನು ಅನೇಕರು ಅನೇಕ ರೀತಿಯಲ್ಲಿ ದಾಖಲೆ ಮಾಡುತ್ತಾರೆ. ಆದರೆ, ದಕ್ಷಿಣ ಕನ್ನಡ ಜಿಲ್ಲೆಯ ಕಾಂತಾವರ ಕನ್ನಡ ಸಂಘ ಇಡೀ ರಾಜ್ಯಕ್ಕೇ ಮಾದರಿ ಎನ್ನುವಂಥ ಕೆಲಸವೊಂದನ್ನು ಮಾಡುತ್ತಿದೆ.

ಕಾಸರಗೋಡೂ ಸೇರಿದಂತೆ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ 30 ಮಂದಿ ಮಹಾನುಭಾವರನ್ನು ಗುರುತಿಸಿ ಅವರ ಪರಿಚಯದ ಪುಟ್ಟ ಪುಸ್ತಿಕೆಗಳನ್ನು ಸಂಘ, ತುಂಬ ಅಚ್ಚುಕಟ್ಟಾಗಿ ಹೊರತರಲು ಯೋಚಿಸಿದೆ. ಈ ಎಲ್ಲ ಪುಸ್ತಕಗಳ ಗಾತ್ರ, ಬೆಲೆ ಒಂದೇ ಇದೆ. 48 ಪುಟಗಳ 33 ರೂಪಾಯಿ ಬೆಲೆಯ ಈ ಪುಸ್ತಿಕೆಗಳು ದ.ಕ. ಜಿಲ್ಲೆಯ 'ಪುಣ್ಯ ಪುರುಷರ' ಮಾಲಿಕೆಯಾಗಿ ರೂಪುಗೊಂಡಿವೆ. ಉತ್ತರ ಕರ್ನಾಟಕದಲ್ಲಿ ಕೆಲವು ವೀರಶೈವ ಮಠಗಳು ಇಂಥ ಪುಣ್ಯಪುರುಷರ ಮಾಲಿಕೆಯನ್ನು ಹೊರತಂದಿವೆ. ಆದರೆ, ಒಂದು ಚಿಕ್ಕ ಊರಿನ ಕನ್ನಡ ಸಂಘ ಈ ಕೆಲಸ ಮಾಡಿರುವುದು ಬೆರಳು ಕಚ್ಚುವಂಥ ಸಾಧನೆ.

ಕಾಂತಾವರ ಕನ್ನಡ ಸಂಘ ಇಂಥ ಸಾಧನೆಗಳನ್ನು ಹಿಂದೆಯೂ ಮಾಡಿದೆ. ಈಗ ಸಂಘಕ್ಕೆ ಮೂವತ್ತರ ಯೌವನ. ಉಡುಪಿ ಜಿಲ್ಲೆಯ ಕಾರ್ಕಳ ಬಳಿಯ ಕಾಂತಾವರ ಕನ್ನಡ ಸಂಘ ತನ್ನ ಕ್ರಿಯಾಶೀಲ ಚಟುವಟಿಕೆಗಳಿಂದ ತಾನು ಹುಟ್ಟಿದ ಚಿಕ್ಕ ಊರಿನ ಸೀಮೆಗಳನ್ನೆಲ್ಲ ಉಲ್ಲಂಘನೆ ಮಾಡಿ ನಾಡಿನಾದ್ಯಂತ ಹೆಸರು ಮಾಡಿದೆ. ಸಂಘಕ್ಕೆ 25 ವರ್ಷ ತುಂಬಿದ್ದಾಗ ಹೊರತಂದ 'ದಕ್ಷಿಣ ಕನ್ನಡದ ಶತಮಾನದ ಕಾವ್ಯ' ಎಂಬ ಬೃಹತ್ ಗ್ರಂಥ, 25 ಲಕ್ಷ ರೂಪಾಯಿ ವೆಚ್ಚದಲ್ಲಿ ನಿರ್ಮಾಣವಾದ 'ಕನ್ನಡ ಭವನ' ಇತ್ಯಾದಿಗಳೂ ಸಂಘದ ಹೆಗ್ಗುರುತುಗಳು.

ಈಗ ತನ್ನ ಮಣ್ಣಿನಲ್ಲಿಯೇ ಹುಟ್ಟಿ ಇಡೀ ನಾಡು ಮಾತ್ರವಲ್ಲ, ದೇಶ ವಿದೇಶಗಳಲ್ಲಿಯೂ ಹೆಸರು ಮಾಡಿದ ವಿವಿಧ ಕ್ಷೇತ್ರಗಳ ಸಾಧಕರನ್ನು ತುಂಬು ಪ್ರೀತಿಯಿಂದ ಆಪ್ತವಾಗಿ ಪರಿಚಯಿಸುವ ಕೆಲಸವನ್ನು ಹಲವು ಲೇಖಕರು ಯಾವ ಪ್ರತಿಫಲಾಪೇಕ್ಷೆಯಿಲ್ಲದೆ ಇಲ್ಲಿ ಮಾಡಿದ್ದಾರೆ. ಅಚ್ಚರಿಯ ಮಾತು ಎಂದರೆ ಒಂದು ಜಿಲ್ಲೆ ಎಷ್ಟೊಂದು ಜನ 'ಪುಣ್ಯ ಪುರುಷ'ರನ್ನು ಸಮಕಾಲೀನ ಸಂದರ್ಭದಲ್ಲಿಯೇ ಸೃಷ್ಟಿ ಮಾಡುತ್ತದೆ ಎಂಬುದಕ್ಕೆ ಈ ಮಾಲಿಕೆ ಒಂದು ದೊಡ್ಡ ನಿದರ್ಶನ.

ಅನೇಕ ಸಾರಿ ನಮಗೆ ನಮ್ಮ ಇತಿಹಾಸ ಮಾತ್ರವಲ್ಲ, ವರ್ತಮಾನದ ಬೆಳವಣಿಗೆಗಳ ಪರಿಚಯವೂ ಇರುವುದಿಲ್ಲ. ಆ ಹಿನ್ನೆಲೆಯಲ್ಲಿ ನಮ್ಮ ಸುತ್ತಲೂ ಯಾವ ಯಾವ ಕ್ಷೇತ್ರದಲ್ಲಿ ಯಾರು ಏನೇನು ಕೆಲಸ ಮಾಡಿದರು, ಮಾಡಬಹುದು ಎಂಬುದಕ್ಕೂ ಈ ಮಾಲಿಕೆ 'ಮಾದರಿಗಳನ್ನು' ಒದಗಿಸುತ್ತದೆ. ಹಾಗಾಗಿಯೇ ಇದು ಸಂಗ್ರಹಯೋಗ್ಯ ಮಾಲಿಕೆ.

ರಾಜ್ಯದ ಇತರ ಜಿಲ್ಲೆಗಳಲ್ಲಿಯೂ ಇಂಥದೇ ಸಾಧಕರು ಇದ್ದಾರೆ. ಕರ್ನಾಟಕ ಆ ದೃಷ್ಟಿಯಿಂದ 'ಬಹುರತ್ನಾ ವಸುಂಧರಾ'. ಕಾಂತಾವರ ಕನ್ನಡ ಸಂಘದ ಕಾರ್ಯಾಧ್ಯಕ್ಷರಾದ ಹಾಗೂ ಮಾಲೆಯ ಗೌರವ ಸಂಪಾದಕರಾದ ಡಾ. ನಾ. ಮೊಗಸಾಲೆ ಅವರು ಹೇಳಿದ ಹಾಗೆ ಎಲ್ಲವನ್ನೂ ಸರ್ಕಾರ ಅಥವಾ ಅಕಾಡೆಮಿ ಮಾಡಬೇಕು ಎಂದು ನಿರೀಕ್ಷಿಸುತ್ತ ಕುಳಿತರೆ ಆಗದು. ನಾಡಿನಾದ್ಯಂತ ಇರುವ ಸ್ಥಳೀಯ ಕನ್ನಡ ಸಂಘಟನೆಗಳು, ಕಾಂತಾವರದ ಹಾದಿಯಲ್ಲಿ ನಡೆದರೆ ಸುವರ್ಣ ಕರ್ನಾಟಕದ ಆಚರಣೆ ನಿಜಕ್ಕೂ ಚಿನ್ನದ ಹಬ್ಬವೆನಿಸಲು ಸಾಧ್ಯ.

ಪದ್ಮರಾಜ ದಂಡಾವತಿ

---

೩ ಜೂನ್ ೨೦೦೭ರ 'ಪ್ರಜಾವಾಣಿ' ಸಾಪ್ತಾಹಿಕ ಪುರವಣಿ*

ಪಾವೆಂ ಎಂಬ ಎರಡಕ್ಷರದಲ್ಲಿ ಪ್ರಕಟವಾಗುತ್ತಿದ್ದ ಪಾಡಿಗಾರು ವೆಂಕಟರಮಣಾಚಾರ್ಯರ ಒಂದಲ್ಲ ಒಂದು ಲೇಖನವನ್ನು ಒಮ್ಮೆಯಾದರೂ ಓದದ ಕನ್ನಡಿಗನನ್ನು ಹುಡುಕುವುದು ಕಷ್ಟ. ವಿಸ್ತಾರವಾದ ಓದು, ವೈವಿಧ್ಯಮಯ ಬರೆಹಗಳು ಅವರದ್ದು. ಬಹು ಶ್ರುತತ್ವ ಅವುಗಳ ವೈಶಿಷ್ಟ್ಯ. ಮಾಸ್ತರಿಕೆ, ಕಾರಕೂನಿಕೆ, ಹೋಟೇಲಿನ ಬಿಲ್‌ರೈಟರಿಕೆಯೇ ಮೊದಲಾದುವುಗಳನ್ನು ಬದುಕಿನ ಮೊದಲ ದಿನಗಳಲ್ಲಿ ಅನಿವಾರ್ಯವಾಗಿ ತೊಡಗಿಸಿಕೊಳ್ಳಬೇಕಾಗಿದ್ದ ಅವರಿಗೆ ಕೊನೆಗೆ ದೊರೆತದ್ದು ಜರ್ನಲಿಸಂ. ಆದರೆ ಎಂದೂ ಜರ್ನಲಿಸಂನ ಪಾಠವನ್ನು ಸ್ವತಃ ಹೇಳಿಸಿಕೊಳ್ಳದ ಅವರು ಬದುಕಿದ ಮತ್ತು ಬರೆದ ರೀತಿ ಇಂದಿನ ಪತ್ರಕರ್ತರಿಗೆ ಮಾದರಿಯಾಗಬಲ್ಲ ಪಥ್ಯ ಮತ್ತು ಪಾಠದ ಹಾಗೆ ಇರುವಂಥಾದ್ದು. ಇಂಗ್ಲೀಷ್ ಭಾಷೆಯಲ್ಲಿ ಮಾತ್ರ ಸಾಧ್ಯ ಎನ್ನಬಹುದಾಗಿದ್ದ, 'ರೀಡರ್ಸ್ ಡೈಜೆಸ್ಟ್'ನಂಥ ಮಾಸಪತ್ರಿಕೆಯ ಸೃಜನಶೀಲ ಧಾರಣ ಶಕ್ತಿ ಕನ್ನಡ ಭಾಷೆಗೂ ಇದೆ ಎಂಬುದನ್ನು ಅವರು,"ಕಸ್ತೂರಿ"ಯ ಮೂಲಕ ರುಜುವಾತು ಪಡಿಸಿದರು. "ಪದಾರ್ಥ ಚಿಂತಾಮಣಿ"ಯಂಥ ಅಪರೂಪದ ಶಬ್ದಾರ್ಥಗಳನ್ನು ಅವರು ಸದಾ ಬೆನ್ನು ಹತ್ತಿದ್ದರು. ಅವರೊಳಗೆ ಇದ್ದ ಒಬ್ಬ ಅಪರೂಪದ ಕವಿ ಮತ್ತು ಕತೆಗಾರನನ್ನು ಪೂರ್ಣ ಪ್ರಮಾಣದಲ್ಲಿ ಎದೆಬಗೆದು ತೋರಿಸಲು ಅವರಿಗೆ ಎಂದೂ ಸಮಯಾವಕಾಶ ಇರಲಿಲ್ಲ. ಆದರೆ ಅವರೊಳಗೆ ಅಡಗಿ ಕುಳಿತಿದ್ದ ಸಜ್ಜನ ಮತ್ತು ಚಿಂತಕನನ್ನು ಅವರು ಸದಾ ನಮ್ಮ ಬಳಿ ಕಳುಹಿಸುತ್ತ ಇರುತ್ತಿದ್ದರು ಬರೆಹಗಳಲ್ಲಿ.

********



ಡಾ. ಶ್ರೀನಿವಾಸ ಹಾವನೂರ ಎಂದ ಕೂಡಲೇ ನಮ್ಮ ಕಣ್ಣಮುಂದೆ ಬರುವುದು ಇಂದಿನ ಬದುಕಿಗೆ ಅನಿವಾರ್ಯವಾಗಿರುವ ಕಂಪ್ಯೂಟರ್ ಮತ್ತು ಅದನ್ನು ಮೊತ್ತಮೊದಲು ಕನ್ನಡ ಸಾಹಿತ್ಯ ಇತಿಹಾಸ ಅಭ್ಯಸಿಸಲು ಅವರು ಬಳಸಿಕೊಂಡ ಬಗೆಗಿನ ಬೆರಗು. ಕಂಪ್ಯೂಟರಿನ ಹಾಗೆ ಅವರು ಕನ್ನಡ ಸಾಹಿತ್ಯಕ್ಷೇತ್ರಕ್ಕೆ ಕೊಟ್ಟದ್ದು ವೈವಿಧ್ಯತೆಯ ಬೆಡಗು. ಕಾದಂ ಕಥನ ಎಂಬ ಹೊಸ ಸಾಹಿತ್ಯ ಪ್ರಕಾರವನ್ನೇ ಹುಟ್ಟು ಹಾಕಿರುವ ಅವರು ನಾಗರಿಕತೆ, ಇತಿಹಾಸ ಸಂಶೋಧನೆ, ಸಾಹಿತ್ಯ ವಿಶ್ಲೇಷಣೆ, ಲಲಿತಪ್ರಬಂಧ, ಜೀವನ ಚರಿತ್ರೆ ಮೊದಲಾದವುಗಳಲ್ಲಿ ಕೈಯಾಡಿಸಿ ಒಂಕ್ಕೂ ಮಿಕ್ಕಿ ಕೃತಿಗಳನ್ನು ಹೊರತಂದವರು. ವಿದೇಶದಲ್ಲಿದ್ದ ಕನ್ನಡ ಸಾಹಿತ್ಯವನ್ನು ಮರಳಿ ತಾಯ್ನಾಡಿಗೆ ಕರೆತಂದರು. ಹೊಸಗನ್ನಡ ಅರುಣೋದಯದ ಸಾಹಿತ್ಯವನ್ನು ಮತ್ತೆ ತೆರೆದು ತೋರಿಸಿದರು. ಮುಂಬಯಿಯ ಹೋಮಿ. ಜೆ. ಬಾಬಾ ಅಣು ಸ್ಥಾವರ ಕೇಂದ್ರದ ಗ್ರಂಥಪಾಲಕರಾಗಿ ದುಡಿದ ಹೆಗ್ಗಳಿಕೆ ಅವರದ್ದು. ಮಂಗಳೂರು ಮತ್ತು ಮುಂಬಯಿ ವಿ.ವಿ.ಯ ಕನ್ನಡ ಅಧ್ಯಯನ ಸಂಸ್ಥೆಯ ಮುಖ್ಯಸ್ಥರಾಗಿದ್ದರು. ಮರಾಠಿ ಕನ್ನಡ ಸ್ನೇಹಸಂವರ್ಧನೆಯಲ್ಲಿ ಪಾತ್ರವಹಿಸಿದವರೂ ಹೌದು. ಬಾಸೆಲ್‌ಮಿಷನ್‌ಸಂಸ್ಥೆಯ ಮತ್ತು ಕರಾವಳಿಯ ಜನರ ಸಂಪರ್ಕ ಸಂಬಂಧ, ಇರಿಸಿಕೊಂಡಿರುವ ಅವರು ಈ ಇಳಿವಯಸ್ಸಿನಲ್ಲೂ ಜೀವನೋತ್ಸಾಹದಿಂದ ಪುಟಿಯುತ್ತಿರುವ ತರುಣ.




ಇದು ಕಾಂತಾವರ ಕನ್ನಡ ಸಂಘದ ನಾಡಿಗೆ ನಮಸ್ಕಾರ –
**ಸಾಹಿತ್ಯ ಸಂಸ್ಕೃತಿ ಚಿಂತನ ಗ್ರಂಥಮಾಲೆಯ ಹನ್ನೆರಡನೆಯ ಕುಸುಮ.**

ಅಧಿಕೃತ ಮಾರಾಟಗಾರರು :

**ಜ್ಞಾನಗಂಗಾ ಪುಸ್ತಕ ಮಳಿಗೆ**

ಪ್ರವಾಸಿ ಮಂದಿರದ ಎದುರು, ದರ್ಬೆ, ಪುತ್ತೂರು – 574202, (ದ.ಕ)

ದೂರವಾಣಿ : 08251 – 232421